विश्वमध्वमहापरिषत् ग्रन्थमाला – १६४

श्रीमदानन्दतीर्थभगवत्पादाचार्यविरचितः

# श्रीमन्महाभारततात्पर्यनिर्णयः

## चतुर्दशव्याख्याविलसितः

## दशमाध्यायतः सप्तदशाध्यायान्तः

## तृतीयो भागः




...सम्पादकौ...

पं. हेब्बूर श्रीनिवासतीर्थाचार्यः, पं. पुराणिक जयतीर्थाचार्यः

...प्रकाशनम्...

श्रीमन्मध्वाचार्यमूलमहासंस्थानम् श्रीउत्तरादिमठः

**विश्वमध्वमहापरिषत्**

बसवनगुडि, बेंगळूरु – ४

२०१६

**Mahabharata Tatparyanirnaya Vol – 3. With 14 commentaries**

**Critically edited by : Pt.Hebbur Srinivasatirthacharya & Pt.Jayateerthacharya Puranik**

**Published by : Vishwa Madhwa Maha Parishat. Sri Jayateertha Vidyapeetha, Uttaradi Math. Bengaluru - 4**

**First Edition : November 2016**

**Copies : 1000**

**No.of Pages : 108+928=1036**



**Price. [In India] : Rs. 750/-**

**Copies can be had from :**

**Vishva Madhwa Maha Parishat**
Research Center, #11, 2nd Floor,
Uttaradimath Building. Uttaradi Math Road,
Shankarpuram, Basavanagudi
BANGALORE - 4 Phone : 080 26603692
Web : **uttaradimath.org**

**Type Setting : VMMP Research wing.**
**Cover Design by : Gopalkrishna Davanageri**

**Printed by :**
**VAGARTHA,** 149, 8th Cross, N.R.Colony, Bangalore-4

अस्मिन् पुस्तके मुद्रितानि

## चतुर्दशव्याख्यानानि

| | | |
|---|---|---|
| १ | श्रीव्यासतीर्थविरचिता | भारतभावपञ्चिका |
| २ | श्रीवेदाङ्गतीर्थविरचिता | तात्पर्यदीपिका |
| ३ | श्रीवादिराजतीर्थविरचिता | भावप्रकाशिका |
| ४ | श्रीसत्याभिनवतीर्थविरचिता | दुर्घटार्थदीपिका |
| ५ | श्रीमधुसूदनभिक्षुविरचितः | प्रमाणसङ्ग्रहः |
| ६ | श्रीआद्यवरदराजाचार्यविरचिता | मन्दसुबोधिनी |
| ७ | श्रीजनार्दनभट्टविरचिता | पदार्थदीपिका |
| ८ | श्रीअनन्तभट्टविरचिता | तन्त्रमाला(सत्तत्वमाला) |
| ९ | श्रीताम्रपर्णी श्रीनिवासाचार्यविरचिता | प्रमेयमणिमाला |
| १० | श्रीभारतश्रीनिवासाचार्यविरचिता | तात्पर्यनिर्णयटिप्पणी |
| ११ | श्रीनिवासाचार्यविरचिता | भावचन्द्रिका |
| १२ | श्रीरामाचार्यविरचिता | भावविवृतिः |
| १३ | श्रीतिरुमलाचार्यविरचिता | अतिविशदवाक्यार्थविवृतिः |
| १४ | श्रीचट्टीकोनेरीआचार्यविरचितः | सर्वटीकासङ्ग्रहः |



[redacted]

ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಸಂಸ್ಥಾಪಕರಾದ

ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ

।। श्रीदिग्विजयरामो विजयते ।।

श्रीमज्जगद्गुरुश्रीमन्मध्वाचार्यमूलमहासंस्थानश्रीमदुत्तरादिमठाधीशानां

श्री १००८ श्रीविभूषितानां

## श्रीमत्सत्यात्मतीर्थानां

# अनुग्रहसन्देशः

प्राचां रामायणमहाभारतभागवतप्रभृतिग्रन्थराजाः परिपूर्णभारतीयसंस्कृतेः तथा सनातनधर्मपरंपरायाः बीजभूताः विराजन्ते । ते च भगवति श्रद्धां, वर्णाश्रमोचितधर्मनिष्ठां, परोपकारमनीषां, गुरुषु विनयं, परलोकसाधनोपायं, संसारे विरक्तिं, हरौ सर्वोत्तमत्वदोषदूरत्वजगज्जन्मादिकारणत्वादिप्रज्ञां, सर्वाधिकभक्तिं वर्धयन्ति । तथापि स्वभाषानभिज्ञजनान् उत्पथं प्रवर्तयन्ति सुपथः प्रच्यावयन्ति च । तेन आभीलं दुर्गतिं लभन्ते इति निश्चप्रचम् ।

त्रैलोक्याचार्याः श्रीमदानन्दतीर्थभगवत्पादाः ब्रह्मसूत्रनिर्णीतराद्धान्तप्रणाल्या भगवत्कृत-पञ्चरात्राद्यविरोधेन वेदव्यासहृदयङ्गमार्थविलासं इतिहासपुराणादीनां प्रदर्श्य सन्मार्गतः स्खलज्जनान् उद्दध्रुः । तदर्थं श्रीमदाचार्यैः विरचितोऽयं ग्रन्थः श्रीमन्महाभारततात्पर्यनिर्णयः । अस्य ग्रन्थस्य आशयं प्रकटयितुं दशाधिकव्याख्यातारः स्वकीयया विशिष्टसरण्या अपूर्वप्रकृष्टव्याख्यानेन परमोपकारं अतन्वन् । तेषु नैककृतीः अस्मद्स्वरूपोद्धारकाः परमपूज्याः अस्मद्गुरवः भूयसा श्रमेण नैकस्थानेभ्यः संगृह्य अस्मान् परमानुग्रहेण अपूरयन् ।

काश्चन अपूर्वव्याख्यानानां मूलमातृकाः पं. व्यासनकेरे प्रभञ्जनाचार्याः, पं.मळगि जयतीर्थाचार्याः, पं. बन्नञ्जे गोविन्दाचार्याः, पं. पगडाल् राममूर्त्याचार्याः, पं. नागसम्पिगे आनन्दतीर्थाचार्याः, पं. प्रदीपसिंहाचार्याः तथा महिशूरस्थ प्राच्यसंशोधनग्रन्थालयः सज्जनोपकाराय प्रकाशनाय ददुरिति तेषां सेवां सामोदं स्मरामः ।

एकोनविंशव्याख्यानैः सहितं श्रीमन्महाभारततात्पर्यनिर्णयग्रन्थं मुद्रापयित्वा उत्तरादिमठतः तथा विश्वमध्वमहापरिषद्द्वारा प्रकाशयितुं संकल्प्य पं. श्रीनिवासतीर्थाचार्यं तथा पं. पुराणिक् जयतीर्थाचार्यं च एतद्ग्रन्थसम्पादनकार्ये अज्ञापितवन्तः । एतौ महता श्रमेण जीर्णानि नैकलिपिलिखितानि हस्तलिखितव्याख्यापुस्कानि संशोध्य आरम्भिकाक्षरसंयोजनं च कृत्वा सम्पादनं चक्रतुः ।

आचार्यचरणनिरूपितप्रमेयानां तथा आख्यायिकानां विषये मूलप्रमाणानि, इतिहासपुराणानि, पञ्चरात्रमन्वादिस्मृतीश्च अधीत्य सूक्ष्मशेमुष्या विचार्य संवादितया पादटिप्पण्यां तेषां संयोजनेन श्रीमदाचार्याणां महतीं सेवां एतौ अकृषताम् । अर्वाचीनाः केचन आचार्योक्तवचांसि अप्रमाणानीति आक्षिपन्ति, निराधारविषयान् निरूपयन्ति इति अपवदन्ति एतदाक्षेपापवादप्रक्षालनक्षमानि मूलप्रमाणानि अत्र संयोजितानि इत्येतत् आचार्यवचसां प्रामाण्यस्थापने एतयोः श्लाघनीयप्रयत्नः । विद्वद्वरेण्यानां गुरूणां महाव्याघ्रोपाह्वविद्यासिंहाचार्याणां मार्गदर्शने संशोधनकार्यं श्रद्धया सम्पादितः वरीवर्तते ।

इतः पूर्वं अध्यायत्रयात्मकः प्रथमो भागः, षडध्यायात्मकः द्वितीयो भागश्च अस्माभिः प्रकाशितः । इदानीं अग्रेतनाष्टाध्यायात्मको तृतीयो भागः प्रकाश्यते । अखण्डश्रीमन्महाभारततात्पर्यनिर्णयसम्पादनं एवमेव तूर्णं पूर्णं स्यात् । इतरविषयसंशोधनमपि एवमेव प्रवर्तताम् । अस्याः कृतेः सुसंयोजनं पं. जोशि महिदासाचार्यः अकरोत् ।

सर्वान् एतान् ज्ञानभक्तिवैराग्यादिभिः अनुगृह्णन्त्विति अस्मदुपास्यान् श्रीमूलसीतासमेत-श्रीमूलरामदिग्विजयराम वेदव्यासान् प्रार्थयामहे । अस्य ग्रन्थस्य उपयोगं सर्वे सुजनाः लभन्तामिति च आशास्महे ।

इति नारायणस्मरणानि

श्रीमत्सत्यात्मतीर्थश्रीपादः उत्तरादिमठ

**श्री सत्यात्मतीर्थश्रीपादाः**

उत्तरादिमठः

# ಪ್ರಕಾಶಕರ ನುಡಿ

ಶ್ರೀಮದಾಚಾರ್ಯರ ಮಹಾಕೃತಿ ಮಹಾಭಾರತತಾತ್ಪರ್ಯನಿರ್ಣಯ. ಅದರ ಮಹತಿಯನ್ನು ಮಹಾನುಭಾವರೇ ಬಲ್ಲರು. ಅದರಲ್ಲಡಗಿರುವ ಪ್ರಮೇಯರಾಶಿಗಳನ್ನು ಜಗತ್ತಿಗೆ ತೋರಿಸುವುದಕ್ಕಾಗಿಯೇ ಅನೇಕ ಜ್ಞಾನಿಗಳು ಇದರ ವ್ಯಾಖ್ಯಾನವನ್ನು ಮಾಡಿ ನಮ್ಮೆಲ್ಲರಿಗೂ ಪರಮೋಪಕಾರ ಮಾಡಿದ್ದಾರೆ. ಅವುಗಳಲ್ಲಿ ಉಪಲಬ್ಧವಾದ 14 ವ್ಯಾಖ್ಯಾನಗಳಸಹಿತವಾಗಿ ತಾತ್ಪರ್ಯನಿರ್ಣಯದ 10 ರಿಂದ 17 ಅಧ್ಯಾಯದ ವರೆಗಿನ ಈ ತೃತೀಯಭಾಗವನ್ನು ಸಾರಸ್ವತಲೋಕಕ್ಕೆ ಸಮರ್ಪಿಸಲು ಪರಿಷತ್ತು ಹರ್ಷಪಡುತ್ತಿದೆ. ಈಗಾಗಲೇ ಮೊದಲ 9 ಅಧ್ಯಾಯಗಳನ್ನೊಳಗೊಂಡ ಎರಡು ಭಾಗಗಳು ಪ್ರಕಾಶಿತವಾಗಿದ್ದು ವಿಮರ್ಶಕರ ವಿದ್ವಾಂಸರ ವಿಶೇಷ ಮನ್ನಣೆಗೆ ಪಾತ್ರವಾಗಿದೆ.

ಪರಿಷತ್ತಿನ ಹೆಮ್ಮೆಯ ಪ್ರಕಾಶನಗಳಲ್ಲೊಂದಾದ ಈ ಕೃತಿ ಪರಮಪೂಜ್ಯ ಶ್ರೀ 1008 ಶ್ರೀ ಸತ್ಯಾತ್ಮತೀರ್ಥರ ಪರಮಾನುಗ್ರಹ ಹಾಗೂ ಸಂಪಾದಕರಾದ ಪಂ.ಜಯತೀರ್ಥಾಚಾರ್ಯ ಪುರಾಣಿಕ, ಪಂ.ಶ್ರೀನಿವಾಸತೀರ್ಥಾಚಾರ್ಯ ಇವರ ನಿರಂತರ ಪರಿಶ್ರಮದಿಂದ ಸಿದ್ಧವಾಗಿದೆ. ಅನೇಕ ಪ್ರಾಚೀನ ಹಸ್ತಪ್ರತಿಗಳನ್ನು ಸಂಶೋಧಿಸಿ ಗ್ರಂಥದ ಸಂಪಾದನೆಯನ್ನು ಮಾಡಿದ್ದಾರೆ. ಶ್ರೀಮದಾಚಾರ್ಯರ ವಾಕ್ಯಗಳಿಗೆ, ಪ್ರಮೇಯಗಳಿಗೆ ಸಂವಾದಿಯಾಗುವ ಅವುಗಳನ್ನು ಸಮರ್ಥನೆ ಮಾಡುವ ಪ್ರಮಾಣಗಳನ್ನು ಯುಕ್ತಿಗಳನ್ನು ನಾನಾ ಮೂಲ ಆಕರಗಳಿಂದ ಸಂಗ್ರಹಸಿ ಅಡಿಟಿಪ್ಪಣಿಯಲ್ಲಿ ನೀಡಿದ್ದಾರೆ. ಅದರ ಹಿಂದೆ ಅವರು ಪಟ್ಟ ಪರಿಶ್ರಮ ಇದು ವಿದ್ವಾಂಸರಿಗೇ ಗೋಚರಿಸುವಂಥದ್ದು. ಅಂತೂ ಈ ಇಬ್ಬರು ವಿದ್ವಾಂಸರ ವಿಶೇಷ ಪರಿಶ್ರಮದಿಂದ ಒಂದು ಮಹತ್ತರವಾದ ಕೃತಿ ಪರಿಷತ್ತನಿಂದ ಹೊರಬರುತ್ತಿದೆ. ಅದಕ್ಕಾಗಿ ಪರಿಷತ್ತು ಅವರಿಗೆ ಆಭಾರಿಯಾಗಿದೆ.

ಈ ಗ್ರಂಥದ ಪ್ರಕಾಶನಕ್ಕೆ ಮೂಲ ಕಾರಣರಾದವರು ಪರಮಪೂಜ್ಯ ಪ್ರಾತಃಸ್ಮರಣೀಯರಾದ ಶ್ರೀ ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು. ಅವರು ನಿರಂತರ ಪರಿಶ್ರಮದಿಂದ ಈ ವ್ಯಾಖ್ಯಾನಗಳನ್ನು ಸಂಗ್ರಹಿಸದೇ ಹೋಗಿದ್ದರೆ ಈ ಕೃತಿ ಅಷ್ಟೇ ಅಲ್ಲ ಪರಿಷತ್ತಿನಿಂದ ಪ್ರಕಾಶಿತವಾದ ಅಪರೂಪದ ಯಾವ ಕೃತಿಗಳೂ ಜಿಜ್ಞಾಸುಗಳ ಕೈಸೇರುತ್ತಿರಲಿಲ್ಲ. ಅದಕ್ಕಾಗಿ ಆ ಮಹಾನುಭಾವರ ಉಪಕಾರವನ್ನು ಎಷ್ಟು ಸ್ಮರಣೆ ಮಾಡಿದರೂ ಸಾಲದು. ಪ್ರತಿಯೊಬ್ಬ ವಿದ್ವಾಂಸರೂ ಜಿಜ್ಞಾಸುಗಳೂ ಅವರಿಗೆ ಚಿರಋಣಿಗಳಾಗಿದ್ದಾರೆ. ಅಂತಹ ಮಹಾಚೇತನದ ಅಡಿದಾವರೆಗಳಲ್ಲಿ ಅನಂತ ಶಿರಸಾಷ್ಟಾಂಗ ನಮಸ್ಕಾರಗಳು.

ಈ ಗ್ರಂಥಪ್ರಕಾಶನಕ್ಕೆ ಮೂಲಪ್ರೇರಣೆ ಪರಮಪೂಜ್ಯ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು. ಪ್ರಾತಃಸ್ಮರಣೀಯರಾದ ಶ್ರೀ ಸತ್ಯಪ್ರಮೋದತೀರ್ಥರು ಸಂಗ್ರಹಿಸಿದ, ತಮ್ಮಲ್ಲಿರುವ ಅನೇಕ ಹಸ್ತಪ್ರತಿಗಳನ್ನು ನೀಡುವುದಲ್ಲದೇ ಪ್ರತಿಯೊಂದು ಹಂತದಲ್ಲಿಯೂ ವಿಶೇಷವಾದ ಪ್ರೋತ್ಸಾಹವನ್ನು ನೀಡುತ್ತಾ ಪರಮೋಪಕಾರ ಮಾಡಿದ್ದಾರೆ. ಈ ಮೂಲಕ ಪರಿಷತ್ತಿನ ಸರ್ವತೋಮುಖವಾದ ಬೆಳವಣಿಗೆಗೆ ಮೂಲವಾಗಿದ್ದಾರೆ. ಇಂತಹ ಮಹಾನುಭಾವರ ಅಡಿದಾವರೆಗಳಲ್ಲಿ ಅನಂತ ಶಿರಸಾಷ್ಟಾಂಗಪ್ರಣಾಮಗಳು.

ಈ ಗ್ರಂಥದ ಪ್ರಕಾಶನಕ್ಕೆ ವಿಶಿಷ್ಟವಾಗಿ ಮಾರ್ಗದರ್ಶನ ಮಾಡಿದವರು ಶ್ರೀಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಪಂ. ವಿದ್ಯಾಸಿಂಹಾಚಾರ್ಯರು. ಸಂಶೋಧನೆಯ ಹಂತದಲ್ಲಿ ಸುಮಾರು ನಾಲ್ಕು ವರ್ಷಗಳ ವರೆಗೆ ಸಂಶೋಧಕರನ್ನು ವಿದ್ಯಾಪೀಠದಲ್ಲಿಯೇ ಇಟ್ಟುಕೊಂಡು ಎಲ್ಲ ರೀತಿಯಾದ ಅನುಕೂಲಗಳನ್ನು ಮಾಡಿಕೊಡುವುದಲ್ಲದೇ ಅವರಿಗೆ ವಿಶಿಷ್ಟವಾದ ರೀತಿಯಲ್ಲಿ ಮಾರ್ಗದರ್ಶನ ಮಾಡಿದ್ದಾರೆ. ಇಂತಹ ಆಚಾರ್ಯರಿಗೆ ಸಾಷ್ಟಾಂಗಪ್ರಣಾಮಗಳು.

ಈ ಗ್ರಂಥದ ಪ್ರಕಾಶನಕ್ಕೆ ತಮ್ಮ ಸಂಗ್ರಹದಲ್ಲಿಯ ಹಸ್ತಪ್ರತಿಗಳನ್ನು ನೀಡಿದ ಪಂ. ಪ್ರಭಂಜನಾಚಾರ್ಯ, ಪಂ. ಬನ್ನಂಜೆ ಗೋವಿಂದಾಚಾರ್ಯ, ಪಂ. ಜಯತೀರ್ಥಾಚಾರ್ಯ ಮಳಗಿ, ಪಂ. ರಾಮಮೂರ್ತ್ಯಾಚಾರ್ಯ ಪಗಡಾಲ, ಪಂ. ಪ್ರದೀಪಸಿಂಹಾಚಾರ್ಯ ಇವರಿಗೆ ನಮಸ್ಕಾರಗಳು. ಮತ್ತು ಮೈಸೂರ್ ಪ್ರಾಚ್ಯವಿದ್ಯಾಸಂಶೋಧನಾಲಯ, ಮದ್ರಾಸ್ ಪ್ರಾಚ್ಯವಿದ್ಯಾಸಂಶೋಧನಾಲಯಕ್ಕೆ, ಮುದ್ರಣದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ ವಾಗರ್ಥಮುದ್ರಣಾಲಯದ ಬಳಗಕ್ಕೂ ಪರಿಷತ್ತು ಆಭಾರಿಯಾಗಿದೆ.

ಈ ಕೃತಿಯ ಲಾಭವನ್ನು ವಿದ್ವಾಂಸರು ಹಾಗೂ ಜಿಜ್ಞಾಸುಗಳು ಪಡೆದಲ್ಲಿ ಪರಿಷತ್ತಿನ ಶ್ರಮ ಸಾರ್ಥಕವಾಗುತ್ತದೆ.

**ಪ್ರಧಾನ ಕಾರ್ಯದರ್ಶಿ**

**ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ, ಬೆಂಗಳೂರು**

# ಪ್ರಸ್ತಾವನೆ

ಪೂರ್ಣಃ ಪ್ರೇಷ್ಠಃ ಪರಃ ಸ್ವಾಮೀ ವ್ಯಾಪ್ತಃ ಕರ್ತಾ ಉಪಕಾರಕಃ ।
ರಕ್ಷತ್ವೇವ ತದೀಯಂ ಮಾಂ ಕರ್ಮಾಚಾರ್ಯ ಗುರುದೇವಗಃ ॥

ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ ಶ್ರೀಮದಾಚಾರ್ಯರ ಮೇರುಕೃತಿ. ಇತಿಹಾಸ-ಪುರಾಣಗಳ ಹಲವು ಬದಿಗಳನ್ನು ಅಂದವಾಗಿ ತೋರಿಸುವ ಮುಕುರ ಕೃತಿ. ಅವುಗಳ ಹಿನ್ನೆಲೆಯಲ್ಲಿರುವ ತಾತ್ತ್ವಿಕವಿಚಾರಗಳ ವಿವರಣೆಯನ್ನು ನೀಡಿ, ಅದರ ಆಧ್ಯಾತ್ಮಿಕಸೌಂದರ್ಯವನ್ನು ಸೆರೆಹಿಡಿದ ಸುಂದರಕೃತಿ. ಅನಂತವಾದ ವೇದಗಳು, ಉಪನಿಷತ್ತು, ಮಹಾಭಾರತ, ಮೂಲರಾಮಾಯಣ, ಪಂಚರಾತ್ರ, ಪುರಾಣಗಳು ಮುಂತಾದ ಮೂಲಗ್ರಂಥಗಳ ಮೂಸೆಯಲ್ಲಿ ಮೂಡಿಬಂದ ಅಮೂಲ್ಯಕೃತಿ. ಇದು ಎಲ್ಲ ಶಾಸ್ತ್ರಗಳ ಅರ್ಥಗಳನ್ನು ನಿರ್ಣಯಿಸುವ ನಿರ್ಣಯಾತ್ಮಕ ಕೃತಿ.

ಅನಂತವೇದಗಳು, ಲಕ್ಷಶ್ಲೋಕಾತ್ಮಕವಾದ ಮಹಾಭಾರತ, ನೂರುಕೋಟಿಶ್ಲೋಕಾತ್ಮಕವಾದ ಪಂಚರಾತ್ರ, ನೂರುಕೋಟಿಶ್ಲೋಕಾತ್ಮಕವಾದ ಮೂಲರಾಮಾಯಣ, ನೂರುಕೋಟಿಶ್ಲೋಕಾತ್ಮಕವಾದ ಪುರಾಣ ಇವುಗಳಲ್ಲಿ ಬರುವ ಕಥೆಗಳನ್ನು ಹಾಗೂ ಪ್ರಮೇಯಗಳನ್ನು ಕೇವಲ ಐದುಸಾವಿರ ಶ್ಲೋಕಗಳಲ್ಲಿ ಸಂಗ್ರಹಮಾಡಿದ ಅದ್ಭುತ ಕೃತಿ.

ಆದ್ದರಿಂದಲೇ ಈ ಗ್ರಂಥದಲ್ಲಿ ಬರುವ 'ಚ' 'ತು' 'ಅಪಿ' 'ಹಿ' ಮೊದಲಾದ ಪ್ರತಿಯೊಂದು ಅಕ್ಷರಗಳೂ ಒಂದು ಹೊಸದಾದ ಕಥೆಯನ್ನು ಹೇಳುತ್ತವೆ. ಅಪೂರ್ವವಾದ ಅನೇಕ ವಿಷಯಗಳ ನಿರ್ಣಯಗಳಿಗೆ ನಾಂದಿಹಾಡುತ್ತವೆ. ಜೊತೆಗೆ ಸಮಗ್ರವಾದ ವೇದ-ವೈದಿಕವಾಙ್ಮಯಗಳನ್ನು ತಿಳಿಯುವುದಕ್ಕೆ ಹೊಸದಾದ ದೃಷ್ಟಿಕೋನವನ್ನು ಕೊಡಲು ಅತ್ಯಂತ ಸಮರ್ಥವಾಗಿವೆ. ಈ ಗ್ರಂಥ ಮಾತ್ರವಲ್ಲ ಆಚಾರ್ಯರ ಯಾವುದೇ ಗ್ರಂಥವನ್ನು ಪಕ್ಷಪಾತವಿಲ್ಲದೆ ಅಧ್ಯಯನಮಾಡುವ ವ್ಯಕ್ತಿಗೆ ಈ ಅನುಭವ ಪ್ರತ್ಯಕ್ಷಸಿದ್ಧ. ಶ್ರೀಮದಾಚಾರ್ಯರು ಕೊಟ್ಟ ಹೊಸ ದೃಷ್ಟಿಯಿಂದ ಮೂಲಗ್ರಂಥಗಳನ್ನು ಅಧ್ಯಯನ ಮಾಡುವ ವ್ಯಕ್ತಿಗೆ ಎಂದಿಗೂ ಅವುಗಳ ಬಗ್ಗೆ ಅಗೌರವ, ಅಶ್ರದ್ಧೆ, ಅನಾದರ ಬರುವ ಪ್ರಸಂಗವೇ ಇಲ್ಲ. ಪ್ರತ್ಯುತ ಗೌರವಾದರಭಕ್ತಿಗಳು ದ್ವಿಗುಣವಾಗುವುದು ನಿಶ್ಚಿತ.

ವೇದ-ಭಾರತ-ಪಂಚರಾತ್ರ-ಪುರಾಣ ಮೊದಲಾದ ವಾಙ್ಮಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದವರಿಗೆ ಮಾತ್ರ ಆಚಾರ್ಯರ ಈ ಮೆರುಕೃತಿಯ 'ಕಿರುಪರಿಚಯ' ಆಗಬಹುದು.

ಈ ಮಹಾಗ್ರಂಥವು ಸಂಗ್ರಹ, ನಿರ್ಣಯ, ವಿಶ್ಲೇಷಣೆ, ವಿಮರ್ಶೆ, ಸಂಶೋಧನೆ ಹೀಗೆ ಅನೇಕಮುಖ-ಗಳಲ್ಲಿ ಹರಡಿಕೊಂಡಿದೆ. ಇದೆಲ್ಲದಕ್ಕೂ ಮಿಗಿಲಾಗಿ ಈ ಗ್ರಂಥದಲ್ಲಿ ಅನುಸ್ಯೂತವಾಗಿ ಕಾಣುವ ಒಂದು ಮುಖವಿದೆ. ಅದು ಮೂಲಗ್ರಂಥದ ಅಮೂಲ್ಯ ಮುಖವೂ ಹೌದು. ಅದರ ಪಡಿನುಡಿಯಾದ ಈ ಗ್ರಂಥದ ಮುಖವೂ ಹೌದು. ಅದೇ ಸಂಸಾರತಾರಿಣಿಯಾದ ಭಕ್ತಿಚೆಲುವೆಯ ಚೆಲುವಿನ ಮುಖ. ಕಾಲ ಕಾಲಕ್ಕೆ, ವಿಶಿಷ್ಟಪ್ರಸಂಗಗಳಲ್ಲಿ ಭಗವಂತನನ್ನು ವಿಶಿಷ್ಟವಾಗಿ ಆದರಿಸುವ, ಆರಾಧಿಸುವ ಮುಖ.

**ಸದ್ಯೋ ಹೃದ್ಯವರುದ್ಧ್ಯತೇ**

ಶ್ರೀಮನ್ಮಹಾಭಾರತಕಥೆಯ ಹಿನ್ನೆಲೆ ಮುನ್ನೆಲೆಯಲ್ಲಿ ತುಂಬಿ ತುಳುಕಿದ ಮಹಾಮೂರ್ತಿ ಶ್ರೀಕೃಷ್ಣ. ಇಡಿಯಾದ ಭಾರತ ಕೃಷ್ಣನಿಗಾಗಿ ಇದ್ದದ್ದು. ಭಾರತದಲ್ಲಿ ನಡೆದ ಪ್ರತಿಕ್ಷಣದ ಪ್ರಸಂಗಗಳು, ಪ್ರತಿಯೊಂದು ಕಾರ್ಯತಂತ್ರಗಳು ವಿಷ್ಣೂದ್ರೇಕವನ್ನು ಸಮರ್ಥಿಸುವುದಕ್ಕಾಗಿ ಮೀಸಲು. ಸಾಧಕನು ಆ ಪ್ರತಿಯೊಂದು ಘಟನೆಗಳಿಂದ, ಆ ಎಲ್ಲ ಪ್ರಸಂಗಗಳಿಂದ ಅವುಗಳು ತಿಳಿಸಿಕೊಡುವ ಭಗವಂತನ ಪಾರಮ್ಯವನ್ನು ತಿಳಿದು ಭಗವಂತನಲ್ಲಿ ಭಕ್ತಿಯನ್ನು ಬೆಳಸಿಕೊಳ್ಳಬೇಕು. ಇದು ಭಾರತವನ್ನು ಬರೆದ ವ್ಯಾಸರ ಉದ್ದೇಶ ಹಾಗೂ ಆಕೂತ. ಆದರೆ ಅಪಕ್ವಚೇತನರು ಆ ಹಿರಿದಾದ ಉದ್ದೇಶ, ಆಕೂತಗಳನ್ನು ತಿಳಿಯದೆ ತಡವರಿಸಿಬಿಟ್ಟರು. ಎಲೆಮರೆ ಕಾಯಿಯಂತೆ ಇರುವ ಭಗವನ್ಮಹಿಮೆಯನ್ನು ಅರಿಯದಾದರು. ಇದನ್ನು ಆಚಾರ್ಯರು ಭಾಗವತತಾತ್ಪರ್ಯದಲ್ಲಿ ಹೇಳುತ್ತಾರೆ.

> **ಯಥಾ ತು ಭಾರತೇ ದೇವೋ ನ ತಥಾಽನ್ಯೇಷು ಕೇಷುಚಿತ್ ।**
> **ಉಚ್ಯತೇ ನ ತಥಾಪೀಶಂ ಜಾನಂತ್ಯಜ್ಞಾ ಜನಾರ್ದನಮ್ ॥ 1.4.30.**
>
> **ಭಾರತಾನ್ನಾಧಿಕಂ ವಿಷ್ಣೋರ್ಮಹಿಮಾವಾಚಕಂ ಕ್ವಚಿತ್ ।**
> **ಭಾರತಾನ್ನ ವಿರಾಗಾಯ ಭಾರತಾನ್ನ ವಿಮುಕ್ತಯೇ ॥ 3.5.12.**

ಮಧ್ವಮುನಿಗಳು ಮಹಾಭಾರತದ ಪ್ರತಿಯೊಂದು ಕಥೆಯ, ಪ್ರತಿಯೊಂದು ಪ್ರಸಂಗದ ಹಿಂದೆ ಗೂಢವಾಗಿ ಇರುವ ಭಗವನ್ಮಹಿಮೆಯನ್ನು ಬೆಳಗಿಸದೆ, ಬಣ್ಣಿಸದೆ ಮುಂದಡಿ ಇಡುವದಿಲ್ಲ. ಪಾಮರರಿಗೂ ಹೃದಯಸ್ಪರ್ಶಿಯಾಗುವಂತೆ, ಭಕ್ತಿಭಾವ ತುಂಬಿ ಹರಿಯುವಂತೆ ಕಥೆಯನ್ನು ಹೆಣೆಯುತ್ತಾರೆ. ಅದರ ಹಿನ್ನೆಲೆಯಲ್ಲಿರುವ ತಾತ್ವಿಕಚಿಂತನೆಯನ್ನು ಬಿಚ್ಚಿಟ್ಟು ಭಗವಂತನಲ್ಲಿ ನಿರತಿಶಯವಾದ ಆದರ ಹುಟ್ಟುವಂತೆ ಮಾಡುತ್ತಾರೆ.

ದೂರದ ಸಮುದ್ರದ ಅಂಚಿನಲ್ಲಿ ಸಣ್ಣಚುಕ್ಕೆಯಾಗಿ ಕಾಣುವ ಹಡಗು, ರೇವಿನಲ್ಲಿರುವ ನಮ್ಮ ಬಳಿಗೆ ಬರುಬರುತ್ತ ದೊಡ್ಡದಾಗಿ ನಮ್ಮ ಎದುರಿಗೆ ಬಂದು ನಿಂತಾಗ ಅದರ ಹೊರತು ಇನ್ನೇನೂ ಕಾಣುವದಿಲ್ಲ. ಹಾಗೆ ಶ್ರೀಮದಾಚಾರ್ಯರ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯವನ್ನು ಸದಾ ಅಭ್ಯಸಿಸುವವನ ಮನಸ್ಸಿನಲ್ಲಿ ಯಾವುದೋ ಮೂಲೆಯಲ್ಲಿರುವ ಭಗವಂತ ಮನಸ್ಸಿಲ್ಲಿ ತುಂಬಿಬಿಡುತ್ತಾನೆ. ಆ ವ್ಯಕ್ತಿ ನಿರಂತರ ಭಗವನ್ನಿಷ್ಠನಾಗುತ್ತಾನೆ, ಭಗವತ್ಪರಾಯಣನಾಗುತ್ತಾನೆ.

ಈ ಗ್ರಂಥವನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿದ ಸಾತ್ವಿಕಚೇತನನ ಪ್ರತಿಯೊಂದು ಒಲವು-ನಿಲುವುಗಳು ಭಗವಂತನಿಗಾಗಿ ಮೀಸಲಾಗುವುದು ನಿಶ್ಚಿತ. ಅವನ ಜೀವನದ ಪ್ರತಿ ಉಸಿರು ಭಗವನ್ಮಯವಾಗುವುದು ಖಚಿತ. ಅದಕ್ಕಾಗಿಯೇ ಉರುದೇವತೆಗಳೂ ಇದನ್ನು ನೋಡಿ, ಓದಿ, ತಿಳಿದು ಹರಿಭಕ್ತಿಭರಿತರಾಗುತ್ತಾರೆ. ಈ ಗ್ರಂಥದ ಅನೇಕ ಗುಣಗಣಗಳಲ್ಲಿ ಇಂತಹ ವಿಷ್ಣ್ವಂಘ್ರಿನಿಷ್ಠೆ ಬೆಳೆಸುವುದು ಅಪೂರ್ವಗುಣ.

ಹೀಗೆ ಸತತ ಹರಿಗುಣಗಳ ತಿಳಿವನ್ನು ನೀಡುವ, ಗಹನಗಂಭೀರವಾದ ರಹಸ್ಯ ಪ್ರಮೇಯಗಳನ್ನು ತಿಳಿಸುವ, ಆಕರಗಳಲ್ಲಿ ಛಿನ್ನ ವಿಚ್ಛಿನ್ನವಾದ ಬೃಹತ್ಕಥಾಕೋಷವನ್ನು ಕ್ರಮಬದ್ಧವಾಗಿ ಶುದ್ಧವಾಗಿ ವಿವರಿಸುವ,

ಯಾವುದೇ ಗ್ರಂಥವನ್ನು ವೈಚಾರಿಕ ತಳಹದಿಯಲ್ಲಿ ಪರಿಶೀಲಿಸುವ, ಗ್ರಂಥದ ಹೊರಬಳಮೈಗಳನ್ನು ಪರಿಶೋಧಿಸುವ ಸೂಕ್ಷ್ಮದೃಷ್ಟಿಯನ್ನು ನೀಡುವ ಗ್ರಂಥವನ್ನು ನೀಡಿ ಪರಮಾನುಗ್ರಹ ಮಾಡಿದ ಮಹಾನುಭಾವರು ಮಧ್ವಮುನಿಗಳು. ಅವರ ಈ ಮಹೋಪಕಾರಕ್ಕಾಗಿ ಎಷ್ಟು ನಮಿಸಿದರೂ ಕಡಿಮೆಯೇ.

ಇಂತಹ ದಿವ್ಯಗ್ರಂಥ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ. ಅದರ ಗಹನಗಾಂಭೀರ್ಯಕ್ಕೆ ಕುರುಹಾಗಿ ವಿದ್ವತ್ಪೂರ್ಣವಾದ ಅನೇಕವ್ಯಾಖ್ಯಾನಗಳು ಇವೆ. ಈ ಎಲ್ಲ ಅಮುದ್ರಿತ ವ್ಯಾಖ್ಯಾನಗಳ ಸಂಶೋಧನಾತ್ಮಕ ಸಂಪಾದನಕಾರ್ಯವು ಇಲ್ಲಿ ನಡೆದಿದೆ. ಈ ಕಾರ್ಯದ ಅಂಗವಾಗಿ ಹಿಂದೆ ಎರಡು ಸಂಪುಟಗಳು ಹೊರಬಂದಿವೆ.

ಪ್ರಥಮಸಂಪುಟ- ಸಕಲಶಾಸ್ತ್ರಾರ್ಥನಿರ್ಣಯ ಮೊದಲ ಅಧ್ಯಾಯದಲ್ಲಿ, ಅದಕ್ಕೆ ಸಂವಾದಿಯಾಗಿ ಭಾರತವಾಕ್ಯಗಳ ಸಂಗ್ರಹ ದ್ವಿತೀಯಾಧ್ಯಾಯದಲ್ಲಿ, ತತ್ವಸೃಷ್ಟಿ, ದೇವತಾಸೃಷ್ಟಿ, ಬ್ರಹ್ಮಾಂಡಸೃಷ್ಟಿ, ವರಾಹಾದ್ಯವತಾರದ ನಿರೂಪಣೆ, ರಾಮಾವತಾರದ ಪ್ರಾರಂಭಿಕ ಕಥೆ ಮೂರನೆಯ ಅಧ್ಯಾಯದಲ್ಲಿ. ಹೀಗೆ ಮೂರು ಅಧ್ಯಾಯಗಳಿಂದ ಕೂಡಿದೆ ಮೊದಲನೆಯ ಸಂಪುಟ. ನಾಲ್ಕನೆಯ ಅಧ್ಯಾಯದಿಂದ ಒಂಭತ್ತನೆಯ ಅಧ್ಯಾಯ ನಿರ್ಣಯಾತ್ಮಕವಾದ, ಪರಿಶುದ್ಧವಾದ ರಾಮಾವತಾರದ ಕಥೆಯನ್ನು ಹೇಳಲು ಹೊರಟಿದೆ. ಅದು ದ್ವಿತೀಯಸಂಪುಟ. ಮೂರನೆಯ ಸಂಪುಟ ಹತ್ತರಿಂದ ಹದಿನೇಳು ಅಧ್ಯಾಯದವರೆಗೆ ಇದೆ. ಒಟ್ಟಾರೆ ಎಂಟು ಅಧ್ಯಾಯಗಳಿಂದ ಕೂಡಿದೆ ಈ ಸಂಪುಟ.

**ವ್ಯಾಸ-ಕೃಷ್ಣ ಸಂಪುಟ**

ಅನಂತವೇದ ಹಾಗು ಸಮಸ್ತ ವೈದಿಕವಾಙ್ಮಯವನ್ನು ಉದ್ಧರಿಸಿ ಜಗತ್ತಿಗೆ ನೀಡಿದ ಶ್ರೀವೇದವ್ಯಾಸಾವತಾರದ ನಿರ್ಣಯಕ್ಕಾಗಿಯೇ ಹತ್ತನೆಯ ಅಧ್ಯಾಯ ಮೀಸಲು. ಈ ಅಧ್ಯಾಯ ಮಾತ್ರವಲ್ಲ, ಮಧ್ವಾಚಾರ್ಯರು ತಮ್ಮ ಇಡಿಯಾದ ಗ್ರಂಥದಲ್ಲಿ ಯಾವುದೇ ಸನ್ನಿವೇಶದಲ್ಲಿ ವ್ಯಾಸರ ಪ್ರಸಂಗ ಬಂದಾಗ ಅವರನ್ನು ಮೂರುನಾಲ್ಕುವಿಶೇಷಣಗಳಿಂದ ವರ್ಣಿಸದೆ ಮುಂದಡಿ ಇಡುವುದಿಲ್ಲ. ಒಂದು ರೀತಿಯಿಂದ **'ತಾದೃಶ ಏವ ಹಿ ಆದರಂ ಉತ್ಪಾದಯನ್ ವ್ಯಾಖ್ಯಾತಿ । ಸಾದರಮೇವ ಶ್ರವಣಾದಿಕಂ ಫಲಾಯಾಲಮ್'** ಎಂಬ ನಿಜಭೃತ್ಯರಾದ ಟೀಕಾಕೃತ್ಪಾದರ ಭಾಷಿತಕ್ಕೆ ತಮ್ಮ ಸಮ್ಮತಿಯನ್ನು ಸೂಚಿಸದಂತಿದೆ.

ಯಾವ ಭಾರತೀಯ ವೈದಿಕದಾರ್ಶನಿಕರೂ ವೇದವ್ಯಾಸರ ಬಗ್ಗೆ ಇಷ್ಟೊಂದು ವಿವರಗಳನ್ನು ಎಲ್ಲೂ ತಿಳಿಸುವುದಿಲ್ಲ. ಈ ಪರಿ ಭಕ್ತಿಯಿಂದ ಕೊಂಡಾಡಿದ್ದನ್ನೂ ಕಾಣುವದಿಲ್ಲ. ವೇದವ್ಯಾಸದೇವರ ಬಗ್ಗೆ ಹೇಳುವ ಪ್ರಸಂಗ ಇದ್ದಾಗಲೂ ಕೇವಲ ಅರ್ಧ ಗಿರ್ಧ ಶ್ಲೋಕಗಳಲ್ಲಿ, ಬೇಕುಬೇಡ ಎಂಬಂತೆ ವರ್ಣಿಸಿ ಮುಂದೆ ಹೋಗುತ್ತಾರೆ. ಶ್ರೀಮಧ್ವಮುನಿಗಳು ಮಾತ್ರ ಅವತಾರದ ಹಿನ್ನೆಲೆ, ಅವರ ಸ್ವರೂಪ, ಗ್ರಂಥರಚನೆ, ಸಂಚಾರ ಇತ್ಯಾದಿಯಾಗಿ ಸಮಗ್ರ ವೇದವ್ಯಾಸರೂಪದ ಪರಿಚಯವನ್ನು ಮಾಡಿಸುತ್ತಾರೆ.

ಮುಂದಿನ ಏಳು ಅಧ್ಯಾಯಗಳು ಭಾರತಕಥೆ. ಅದರಲ್ಲೂ ವಿಶೇಷವಾಗಿ ಕೃಷ್ಣನ ಕಥಾನಿರ್ಣಯಕ್ಕಾಗಿ ಮೀಸಲಾಗಿದೆ. ಅದಕ್ಕಾಗಿಯೆ ಈ ಸಂಪುಟಕ್ಕೆ 'ವ್ಯಾಸಕೃಷ್ಣಸಂಪುಟ' ಎಂದು ಪ್ರಾಸಂಗಿಕವಾಗಿ ಕರೆದಿದ್ದು.

**ಶ್ರೀವೇದವ್ಯಾಸಾವತಾರ...**

ಸಕಲಸಜ್ಜನಸಮುದಾಯದ ಕತ್ತಲೆಯನ್ನು ಕಳೆಯುವ ಜ್ಞಾನಸೂರ್ಯರು ಶ್ರೀವೇದವ್ಯಾಸದೇವರು. ಉರುದೇವತೆಗಳಿಗೂ ಅಧ್ಯಾತ್ಮಜ್ಞಾನದ ಹೊನಲನ್ನು ಹರಿಸಿದ ಪ್ರಜ್ಞಾಪುರುಷರು. ಸ್ತ್ರೀಶೂದ್ರಾದಿಗಳಿಗೂ ತತ್ವಜ್ಞಾನದ ಹಸಿವನ್ನು ಹಿಂಗಿಸಿದ ಕರುಣಾಮೂರ್ತಿಗಳು ಇವರು. ಕಪಿಲ, ಹಯಗ್ರೀವ, ದತ್ತಾತ್ರೇಯ ಮೊದಲಾದ ಜ್ಞಾನಾವತಾರಗಳಂತೆ ಶ್ರೀಹರಿಯ ಸಾಕ್ಷಾತ್ತಾದ, ಪರಿಪೂರ್ಣವಾದ ಜ್ಞಾನಾವತಾರ ವ್ಯಾಸಾವತಾರ. ಇದನ್ನು ವಿಷ್ಣುಪುರಾಣದಲ್ಲಿ ಸೂಕ್ಷ್ಮವಾಗಿ ಕಾಣಬಹುದು. ಜ್ಞಾನಕಾರ್ಯಾವತಾರ, ಬಲಕಾರ್ಯಾವತಾರ ಎಂಬ ಅವತಾರಗಳ ಪ್ರಭೇದವನ್ನೂ ಮುಂದಿನವಚನಗಳಲ್ಲಿ ಕಾಣಬಹುದು.

ಚತುರ್ಯುಗೇಽಪ್ಯಸೌ ವಿಷ್ಣುಃ ಸ್ಥಿತಿವ್ಯಾಪಾರಲಕ್ಷಣಃ ।
ಯುಗವ್ಯವಸ್ಥಾಂ ಕುರುತೇ ತಥಾ ಮೈತ್ರೇಯ ತಚ್ಛೃಣು ॥

ಕೃತೇ ಯುಗೇ ಪರಂ ಜ್ಞಾನಂ ಕಪಿಲಾದಿಸ್ವರೂಪಧೃಕ್ ।
ದದಾತಿ ಸರ್ವಭೂತಾತ್ಮಾ ಸರ್ವಭೂತಹಿತೇ ರತಃ ॥

ಚಕ್ರವರ್ತಿಸ್ವರೂಪೇಣ ತ್ರೇತಾಯಾಮಪಿ ಸ ಪ್ರಭುಃ ।
ದುಷ್ಟಾನಾಂ ನಿಗ್ರಹಂ ಕುರ್ವನ್ ಪರಿಪಾತಿ ಜಗತ್ತ್ರಯಮ್ ॥

ವೇದಮೇಕಂ ಚತುರ್ಭೇದಂ ಕೃತ್ವಾ ಶಾಖಾಶತೈರ್ವಿಭುಃ ।
ಕರೋತಿ ಬಹುಲಂ ಭೂಯೋ ವೇದವ್ಯಾಸಸ್ವರೂಪಧೃಕ್ ॥

ವೇದಾಂಸ್ತು ದ್ವಾಪರೇ ವ್ಯಸ್ಯ ಕಲೇರಂತೇ ಪುನರ್ಹರಿಃ ।
ಕಲ್ಕಿಸ್ವರೂಪೀ ದುರ್ವೃತ್ತಾನ್ ಮಾರ್ಗೇ ಸ್ಥಾಪಯತಿ ಪ್ರಭುಃ ॥ ವಿಷ್ಣುಪುರಾಣ-3.2.55

ಮೇಲಿನ ವಿಷ್ಣುಪುರಾಣದ ವಚನದಲ್ಲಿ ವಿಷ್ಣುವೇ ವೇದವ್ಯಾಸರೂಪವನ್ನು ಧರಿಸಿ ವೇದವಿಭಾಗವನ್ನು ಮಾಡಿದ ಎಂಬುದಾಗಿ ಸ್ಪಷ್ಟವಾಗಿ ಹೇಳಿದ್ದಾರೆ.

ಹೀಗಿದ್ದರೂ 'ವೇದವ್ಯಾಸದೇವರು ಒಬ್ಬ ಋಷಿ' ಎಂದು ಕೆಲವರು, 'ವ್ಯಾಸರು ವಿಷ್ಣುವಿನ ಸಾಕ್ಷಾತ್ ಅವತಾರವಲ್ಲ. ಆವೇಶಾವತಾರ' ಎಂದು ಕೆಲವರು ಹೇಳುತ್ತಾರೆ.

ಶಂಕರರು, 'ಅಪಾಂತರತಮಾ' ಎಂಬ ಋಷಿಯೇ ಕೃಷ್ಣದ್ವೈಪಾಯನರು ಎಂದು ಹೇಳುತ್ತಾರೆ. ಬ್ರಹ್ಮಜ್ಞಾನಿ, ಸರ್ವಜ್ಞ ಎಂದೂ ಹೇಳುತ್ತಾರೆ.

'ಬ್ರಹ್ಮವಿದಾಮಪಿ ಕೇಷಾಂಚಿತ್ ಇತಿಹಾಸಪುರಾಣಯೋಃ ದೇಹಾಂತರೋತ್ಪತ್ತಿದರ್ಶನಾತ್ । ತಥಾಹಿ ಅಪಾಂತರತಮಾನಾಮ ವೇದಾಚಾರ್ಯಃ ಪುರಾಣರ್ಷಿಃ ವಿಷ್ಣುನಿಯೋಗಾತ್ ಕಲಿದ್ವಾಪರಯೋಃ ಸಂಧೌ ಕೃಷ್ಣದ್ವೈಪಾಯನಃ ಸಂಬಭೂವೇತಿ ಸ್ಮರಂತಿ ।' 3.3.32.ಬ್ರ.ಸೂ.ಶಾಂ.ಭಾ.

ಶಾಂಕರಭಾಷ್ಯದ ಅಭಿಪ್ರಾಯ ಇಷ್ಟು. 'ವಿಷ್ಣುವಿನ ಆಜ್ಞೆಯಿಂದ ಅಪಾಂತರತಮಾ ಎಂಬ ಋಷಿಗಳು ಕೃಷ್ಣದ್ವೈಪಾಯನರಾಗಿ ಹುಟ್ಟಿದರು' ಎಂದು ಶಂಕರರು ಹೇಳುತ್ತಾರೆ. ಅವರು ಇಲ್ಲಿ 'ಕೃಷ್ಣದ್ವೈಪಾಯನ' ಶಬ್ದದ ಬದಲಾಗಿ 'ಅಪಾಂತರತಮನು ವ್ಯಾಸನಾಗಿ ಹುಟ್ಟಿದ' ಎಂಬ ಶಬ್ದ ಬಳಸಿದ್ದರೆ ಯಾವ

ಗೊಂದಲಗಳೂ ಇರುತ್ತಿರಲಿಲ್ಲ. ವಿಷ್ಣುಪುರಾಣಾದಿಗಳಲ್ಲಿ ವಸಿಷ್ಠ, ಭರದ್ವಾಜ ಮೊದಲಾದ ಋಷಿಗಳು ಒಂದೊಂದು ದ್ವಾಪರದಲ್ಲಿ ವ್ಯಾಸರಾದರು ಎಂದಿದೆ. ಅದರಂತೆ 'ಅಪಾಂತರತಮ ಎಂಬ ಋಷಿಯೂ ಯಾವುದೋ ಒಂದು ದ್ವಾಪರದಲ್ಲಿ ವ್ಯಾಸನಾದ' ಎಂಬುದಾಗಿ ಶಂಕರರು ಹೇಳುತ್ತಿದ್ದಾರೆ ಎಂದು ಕಥಂಚಿತ್ ಅರ್ಥೈಸಬಹುದಾಗಿತ್ತು. ಆದರೆ ಶಂಕರರು, 'ಕೃಷ್ಣದ್ವೈಪಾಯನ ಎಂಬ ವ್ಯಾಸರೇ ಅಪಾಂತರತಮಾ ಎಂಬ ಋಷಿ' ಎಂದು ಹೇಳುತ್ತಿದ್ದಾರೆ. 'ಕೃಷ್ಣದ್ವೈಪಾಯನ' ಎಂಬ ವಿಶೇಷಶಬ್ದ ಬಳಸಿರುವುದರಿಂದ ಬ್ರಹ್ಮಸೂತ್ರಗಳನ್ನು ರಚಿಸಿದ, ಸಾಕ್ಷಾನ್ನಾರಾಯಣಾವತಾರರಾದ ಕೃಷ್ಣದ್ವೈಪಾಯನರನ್ನೇ ಅಪಾಂತರತಮ ಎಂಬ ಋಷಿಯ ಅವತಾರ ಎಂದು ಹೇಳುತ್ತಿದ್ದಾರೆ ಎಂದು ಸ್ಫುಟವಾಗುತ್ತದೆ. ಇದು ಸಮಂಜಸವಲ್ಲ.

> **ಅ ಆ ಅಂ ಅಃ ಪುರಾಣರ್ಷಿಃ ವ್ಯಾಸಃ ಶಾಖಾಸಹಸ್ರಕೃತ್ ।**
> **(ಆಶ್ರಮಾತ್ಮಾ ಪುರಾಣರ್ಷಿಃ ವ್ಯಾಸಃ ಶಾಖಾಸಹಸ್ರಕೃತ್ ।)**
> **ಮಹಾಭಾರತನಿರ್ಮಾತಾ ಕವೀಂದ್ರೋ ಬಾದರಾಯಣಃ ॥**
>
> **ಕೃಷ್ಣದ್ವೈಪಾಯನಃ ಸರ್ವಪುರುಷಾರ್ಥೈಕಬೋಧಕಃ ।**
> **ವೇದಾಂತಕರ್ತಾ ಬ್ರಹ್ಮೈಕವ್ಯಂಜಕಃ ಪುರುವಂಶಕೃತ್ ॥ ಪಾದ್ಮ,ಉ.ಖಂ,71.275-276**

ಎಂಬ ವಾಸುದೇವಸಹಸ್ರನಾಮವಚನದಲ್ಲಿ ವೇದವಿಭಾಗಮಾಡಿದವರು, ಮಹಾಭಾರತವನ್ನು ರಚಿಸಿದವರು, ಬ್ರಹ್ಮಸೂತ್ರಗಳನ್ನು ರಚಿಸಿದವರು ಕೃಷ್ಣದ್ವೈಪಾಯನ ಎಂಬ ವ್ಯಾಸರು ಎಂದು ಹೇಳಿದ್ದಾರೆ. ಮಹಾಭಾರತಾದಿಗಳನ್ನು ರಚಿಸಿದ ಕೃಷ್ಣದ್ವೈಪಾಯನರೇ ಸಾಕ್ಷಾನ್ನಾರಾಯಣ ಎಂದು 'ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್' ಎಂಬ ಪ್ರಮಾಣದಲ್ಲಿ ಹೇಳಿದ್ದಾರೆ. ಆದ್ದರಿಂದ ಶಂಕರರು ಹೇಳುವಂತೆ ಕೃಷ್ಣದ್ವೈಪಾಯನರು ಅಪಾಂತರತಮ ಎಂಬ ಋಷಿ ಎನ್ನುವ ಹೇಳಿಕೆ ನಿರವಕಾಶವಾದ ಅನೇಕಪ್ರಮಾಣಗಳಿಗೆ ಅತ್ಯಂತ ವಿರುದ್ಧವಾದದ್ದು.

**ಮಧುಸೂದನಸರಸ್ವತಿಗಳ ಅಭಿಪ್ರಾಯ**

ಮಧುಸೂದನಸರಸ್ವತಿಗಳು ವಿಭೂತಿಗಳ ಕುರಿತಾಗಿ ಹೇಳುವಾಗ ೧೦ನೇ ಅಧ್ಯಾಯದ ೨೧ ನೆಯ ಶ್ಲೋಕಕ್ಕೆ ವ್ಯಾಖ್ಯಾನಿಸುತ್ತಾ -

**''ವಾಮನರಾಮಾದಯಶ್ಚಾವತಾರಾಃ ಸರ್ವೈಶ್ವರ್ಯಶಾಲಿನೋಽಪ್ಯನೇನ ರೂಪೇಣ ಧ್ಯಾನವಿವಕ್ಷಯಾ ವಿಭೂತಿಷು ಪಠ್ಯಂತೇ । 'ವೃಷ್ಣೀನಾಂ ವಾಸುದೇವೋಽಸ್ಮೀತಿ ತೇನ ರೂಪೇಣ ಧ್ಯಾನವಿವಕ್ಷಯಾ ಸ್ವಸ್ಯಾಪಿ ಸ್ವವಿಭೂತಿಮಧ್ಯೇ ಪಾಠವತ್''** ಎಂದು ತಿಳಿಸುತ್ತಾರೆ. ನಂತರ,

> **ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
> **ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ ಭ.ಗೀ. 10.37**

ಎಂಬ ಗೀತೆಯ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ -

**'ವೃಷ್ಣೀನಾಮಿತಿ ಸಾಕ್ಷಾದೀಶ್ವರಸ್ಯಾಪಿ ವಿಭೂತಿಮಧ್ಯೇ ಪಾಠಃ ತೇನ ರೂಪೇಣ ಚಿಂತನಾರ್ಥ ಇತಿ ಪ್ರಾಗೇವ ಉಕ್ತಮ್ ।'** ಎಂದು ವ್ಯಾಖ್ಯಾನಿಸಿದ್ದಾರೆ.

ತಾತ್ಪರ್ಯಾರ್ಥ- ವಾಮನ, ರಾಮ ಮೊದಲಾದ ಅವತಾರಗಳು ಸರ್ವೈಶ್ವರ್ಯ ಉಳ್ಳದ್ದಾಗಿವೆ. ಆದರೂ ಅವುಗಳನ್ನು ವಿಭೂತಿಗಳಲ್ಲಿ ಒಂದಾಗಿ ಪರಿಗಣಿಸಿದ್ದು ವಾಮನ, ರಾಮ ಮುಂತಾದವುಗಳು ವಿಭೂತಿವಿಶೇಷ ಎಂದು ಉಪಾಸನೆ ಮಾಡುವದಕ್ಕಾಗಿ. ಅದೇರೀತಿ ಸಾಕ್ಷಾದೀಶ್ವರನಾಗಿದ್ದರೂ ಶ್ರೀಕೃಷ್ಣನನ್ನು ವಿಭೂತಿರೂಪೇಣ ಉಪಾಸನೆಗಾಗಿ ಇಲ್ಲಿ ಪರಿಗಣಿಸಲಾಗಿದೆ ಎಂದು ಮೇಲಿನ ವಾಕ್ಯಗಳ ಅಭಿಪ್ರಾಯ.

ಮುಂದೆ, ಹದಿನೈದನೆಯ ಅಧ್ಯಾಯದಲ್ಲಿ 'ವೇದಾಂತಕೃತ್ ವೇದವಿದೇವ ಚಾಹಮ್' ಎಂಬ ಶ್ಲೋಕಕ್ಕೆ ವ್ಯಾಖ್ಯಾನ ಬರೆಯುವಾಗ 'ವೇದಾಂತಕೃತ್ ವೇದಾಂತಾರ್ಥಸಂಪ್ರದಾಯಪ್ರವರ್ತಕೋ ವೇದವ್ಯಾಸಾದಿ ರೂಪೇಣ' ಎಂದು ವ್ಯಾಖ್ಯಾನಮಾಡುತ್ತಾರೆ. ಇಲ್ಲಿ ಅವರ ಪ್ರಕಾರ 'ಕೃಷ್ಣ ಸಾಕ್ಷಾದೀಶ್ವರ. ಅವನು 'ಅಹಮೇವ ವೇದಾಂತಕೃತ್' 'ನಾನೇ ವೇದವ್ಯಾಸರೂಪದಿಂದ ವೇದಾಂತಾರ್ಥವನ್ನು ಪ್ರವರ್ತನಮಾಡುತ್ತೇನೆ ಎಂದು ಹೇಳಿಕೊಳ್ಳುತ್ತಿದ್ದಾನೆ' ಎಂದು ಮಧುಸೂದನಸರಸ್ವತಿಗಳು ವ್ಯಾಖ್ಯಾನ ಮಾಡಿದ ಹಾಗಾಯಿತು. ಒಟ್ಟಾರೆ ವ್ಯಾಖ್ಯಾನದ ತಾತ್ಪರ್ಯವೇನೆಂದರೆ ಮಧುಸೂದನಸರಸ್ವತಿಗಳು ಇಲ್ಲಿ ಸಾಕ್ಷಾದೀಶ್ವರನಾದ ಕೃಷ್ಣನೇ ವ್ಯಾಸರು ಎಂದು ಹೇಳಿದ ಹಾಗಾಗುತ್ತದೆ.

**ಭಾಮತಿಯ ಅಭಿಪ್ರಾಯ**

ಶಾಂಕರಭಾಷ್ಯದಲ್ಲಿ ಶಂಕರಾಚಾರ್ಯರು ಕೃಷ್ಣದ್ವೈಪಾಯನರು ಒಬ್ಬ ಋಷಿ ಎಂದು ಹೇಳಿದ್ದರೂ ಇದಕ್ಕೆ ವಿಪರೀತವಾಗಿ ವಾಚಸ್ಪತಿಮಿಶ್ರರು 'ಬ್ರಹ್ಮಸೂತ್ರಕೃತೇ ತಸ್ಮೈ ವೇದವ್ಯಾಸಾಯ ವೇಧಸೇ । ಜ್ಞಾನಶಕ್ತ್ಯವತಾರಾಯ ನಮೋ ಭಗವತೋ ಹರೇಃ' ಎಂದು ವ್ಯಾಸರು ಹರ್ಯವತಾರ ಎಂಬುದಾಗಿ ಹೇಳುತ್ತಾರೆ. ಕಲ್ಪತರುಕಾರರು 'ಹರೇಃ ಜ್ಞಾನಶಕ್ತೇರವತಾರಃ ಪ್ರಾಪ್ತಿರ್ಯಸ್ಮಿನ್ ಸ ತಥಾ । ತಥಾಚಾಹ ಪರಾಶರಃ 'ದ್ವಾಪರೇ ದ್ವಾಪರೇ ವಿಷ್ಣುಃ ವ್ಯಾಸರೂಪೀ ಮಹಾಮುನೇ । ವೇದಮೇಕಂ ಸುಬಹುಧಾ ಕುರುತೇ ಜಗತೋ ಹಿತಮ್'' ಎಂದು ಭಾಮತೀಕಾರರ ಮಾತನ್ನು ಸಪ್ರಮಾಣವಾಗಿ ಸಮರ್ಥಿಸುತ್ತಾರೆ.

**ಭಾಗವತಟೀಕೆ**

ಶ್ರೀಮದ್ಭಾಗವತಕ್ಕಿರುವ ಶ್ರೀಧರೀಟೀಕೆಯು ಅದ್ವೈತಮತಾನುಸಾರಿಯಾದದ್ದು. ಇದಕ್ಕೆ ವಂಶೀಧರಶರ್ಮರು 'ವಂಶೀಧರೀ' ಟಿಪ್ಪಣಿಯನ್ನು ಬರೆದಿದ್ದಾರೆ. ಅದ್ವೈತಮತಾನುಸಾರಿಯಾದ ಈ ವ್ಯಾಖ್ಯಾನದಲ್ಲಿ 'ಮಹಾಮುನಿಕೃತೇ' ಎಂಬ ಶ್ಲೋಕಕ್ಕೆ ವ್ಯಾಖ್ಯಾನಮಾಡುವಾಗ ವಂಶೀಧರರು ವ್ಯಾಸರು ಸಾಕ್ಷಾತ್ ನಾರಾಯಣನ ಅವತಾರ ಎಂದು ಸಪ್ರಮಾಣವಾಗಿ ಸಮರ್ಥಿಸಿದ್ದಾರೆ. ಇನ್ನೂ ಅನೇಕ ಪ್ರಸಂಗಗಳಲ್ಲಿ ಈ ವಿಷಯವನ್ನು ಹೇಳುತ್ತಾರೆ.

1. ''ವೇತ್ತಾ ವೇದ್ಯಸ್ಯ ಸರ್ವಸ್ಯ ಮುನಿಃ ಸದ್ಭಿರುದಾಹೃತಃ' ಇತ್ಯಭಿಧಾನಾನ್ಮುನಯೋ ಬ್ರಹ್ಮಾದಯಃ ತೇಭ್ಯೋಽಪ್ಯತಿಶಯಿತಸರ್ವಜ್ಞತ್ವಾತ್ ಮಹಾಮುನಿಃ ವ್ಯಾಸಃ ಸಾಕ್ಷಾನ್ನಾರಾಯಣಃ । 'ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್' ಇತಿ ಭಾರತೋಕ್ತೇಃ । ಭಾಗ.1.1.2''

2. 'ತಸ್ಮಾನ್ನಾರಾಯಣಾವತಾರೇಣ ಸರ್ವಜ್ಞತಮೇನ ಕೃಷ್ಣದ್ವೈಪಾಯನೇನ ಅತ್ಯುತ್ತಮೇನ ಪ್ರಣೀತತ್ವಾತ್ ಪ್ರಮಾಣತಮಮಿದಂ ಶ್ರೀಮದ್ಭಾಗವತಮ್'

3. 'ಯಾನಿ ವೇದವಿದಾಂ ಶ್ರೇಷ್ಠೋ ಭಗವಾನ್ ಬಾದರಾಯಣಃ' ಎಂಬ ಶ್ಲೋಕದ (ಭಾಗ. 1.1.7.) ವ್ಯಾಖ್ಯಾನದಲ್ಲಿ 'ಭಗವಾನ್ ಸಾಕ್ಷಾನ್ನಾರಾಯಣತ್ವಾತ್ । 'ವ್ಯಾಸೋ ನಾರಾಯಣಃ ಸ್ವಯಮ್' ಇತಿ ಆದಿಪುರಾಣಾತ್''

ಈ ರೀತಿ ಶಂಕರಾಚಾರ್ಯರು 'ಕೃಷ್ಣದ್ವೈಪಾಯನರು ಒಬ್ಬ ಋಷಿ' ಎಂದು ಹೇಳುತ್ತಾರೆ. 'ವ್ಯಾಸರು ಸಾಕ್ಷಾತ್ ನಾರಾಯಣ' ಎಂದು ಅವರ ಅನುಯಾಯಿಗಳು ಹೇಳುತ್ತಾರೆ. ಹೀಗೆ ಶಂಕರಾಚಾರ್ಯರು ಹಾಗೂ ಅವರ ಅನುಯಾಯಿಗಳಲ್ಲಿ, ಸಮಸ್ತಪ್ರಪಂಚಕ್ಕೆ ಜ್ಞಾನಗಂಗೆಯನ್ನು ಹರಿಸಿ ಮಹದುಪಕಾರಮಾಡಿದ ವೇದವ್ಯಾಸದೇವರ ವಿಷಯದಲ್ಲಿ ಗೊಂದಲ ತುಂಬಿಕೊಂಡಿದೆ.

**ಶ್ರೀವೈಷ್ಣವರ ಅಭಿಪ್ರಾಯ**

'ತತ್ವತ್ರಯಂ' ಪಿಳ್ಳೈ ಲೋಕಾಚಾರ್ಯರು ಬರೆದ ಅಷ್ಟಾದಶರಹಸ್ಯಗಳಲ್ಲಿ ಒಂದು ರಹಸ್ಯಗ್ರಂಥ. ಈ ಗ್ರಂಥ ವಿಶಿಷ್ಟಾದ್ವೈತಸಿದ್ಧಾಂತದ ಪ್ರಮೇಯಗಳಿಗೆ ಒಂದು ಕೈಪಿಡಿಯಾಗಿದೆ. ಇದರಲ್ಲಿ ಚಿತ್, ಅಚಿತ್, ಈಶ್ವರ ತತ್ವಗಳ ನಿರೂಪಣೆಯನ್ನು ಸೂತ್ರರೂಪದಲ್ಲಿ ನೀಡಲಾಗಿದೆ. ಇಲ್ಲಿ ಶ್ರೀಹರಿಯ ಅವತಾರಕ್ಕೆ ಸಂಬಂಧಿಸಿದ ವಿಶಿಷ್ಟಾದ್ವೈತಮತದ ಎಲ್ಲ ವಿಚಾರಗಳು ಪ್ರಾಯಃ ನಮಗೆ ಸಿಗುತ್ತವೆ.

ಮಮ ಪ್ರಕಾರಾ ಪಂಚೇತಿ ಪ್ರಾಹುರ್ವೇದಾಂತಪಾರಗಾಃ ।
ಪರವ್ಯೂಹಶ್ಚ ವಿಭವೋ ನಿಯಂತಾ ಸರ್ವದೇಹಿನಾಮ್ ॥

ಅರ್ಚಾವತಾರಶ್ಚ ತಥಾ ದಯಾಲುಃ ಪುರುಷಾಕೃತಿಃ ।
ಇತ್ಯೇವಂ ಪಂಚಧಾ ಪ್ರಾಹುಃ ಮಾಂ ವೇದಾಂತವಿದೋ ಜನಾಃ ॥ ವಿಷ್ವಕ್ಸೇನಸಂಹಿತಾ

ಪಿಳ್ಳೈ ಲೋಕಾಚಾರ್ಯರು ವಿಷ್ವಕ್ಸೇನಸಂಹಿತೆಯ ವಚನಗಳನ್ನು ಅನುಸರಿಸಿ ಈ ಪ್ರಮೇಯವನ್ನು ನಿರೂಪಿಸುತ್ತಾರೆ. ಈಶ್ವರನ ಸ್ವರೂಪ ೧. ಪರ, ೨. ವ್ಯೂಹ, ೩. ಅಂತರ್ಯಾಮಿ, ೪. ವಿಭವ, ೫. ಅರ್ಚಾ ಹೀಗೆ ಐದು ಬಗೆಯಾಗಿದೆ. ಮೊದಲನೆಯದ್ದು ಪರಾತ್ಪರವಾದ 'ಪರ' ಎಂಬ ಭಗವಂತನ ರೂಪ. ಉಳಿದ ನಾಲ್ಕು ವ್ಯೂಹ, ಅಂತರ್ಯಾಮಿ, ವಿಭವ, ಅರ್ಚಾ ಎಂಬುವುದು ಭಗವಂತನ ಅವತಾರ ರೂಪಗಳು.

ಈ ಐದು ವಿಧವಾದ ರೂಪಗಳ ವಿಶೇಷ ವಿವರಗಳನ್ನು ವಿಷ್ವಕ್ಸೇನಸಂಹಿತೆಗೆ ಅನುಗುಣವಾಗಿ ಹೀಗೆ ಹೇಳುತ್ತಾರೆ -

೧. 'ಪರ' ಎಂದರೆ ಕಾಲ-ದೇಶಾತೀತವಾದ ಭಗವಂತನ ಪರವಾಸುದೇವರೂಪ. ನಿತ್ಯವಿಭೂತಿಗಳಲ್ಲಿ ಕಂಡುಬರುವ ಶ್ರೀಹರಿಯ ರೂಪವಿದು. ಇದು ನಿತ್ಯಮುಕ್ತರಿಂದ ಮಾತ್ರ ಸೇವ್ಯವಾದುದು.

೨. ವ್ಯೂಹ - ಭಗವಂತನು ಸೃಷ್ಟ್ಯಾದಿಗಳನ್ನುದ್ದೇಶಿಸಿ ತೆಗೆದುಕೊಳ್ಳುವ ಅವತಾರಗಳಲ್ಲಿ ವ್ಯೂಹಾವತಾರವು ಮೊದಲನೆಯದು.

೩. ಅಂತರ್ಯಾಮೀ- ಸಕಲಪ್ರಾಣಿಗಳಿಗೂ ಅಂತರ್ಯಾಮಿಯಾಗಿರುವ ರೂಪ, ಅವತಾರ ಅಂತರ್ಯಾಮ್ಯವತಾರ.

೪. ವಿಭವ - ಮತ್ಸ್ಯ, ಕೂರ್ಮ, ವರಾಹ ಮೊದಲಾದ ಅವತಾರಗಳು ವಿಭವಾವತಾರಗಳು.

೫. ಅರ್ಚಾ - ಪ್ರತೀಕಗಳಲ್ಲಿ ಸನ್ನಿಹಿತವಾದ ಭಗವದ್ರೂಪ ಹಾಗೂ ಆವಹನಾದಿಗಳಿಂದ ಅಭೀಷ್ಟ ಅಧಿಷ್ಠಾನಗಳಲ್ಲಿ ಸನ್ನಿಹಿತವಾದ ರೂಪಗಳು.

ಇವುಗಳಲ್ಲಿ ನಾಲ್ಕನೆಯದಾದ ನೇರವಾಗಿ ಭೂಮಿಯಲ್ಲಿ ಇಳಿದು ಬರುವ ವಿಭವಾವತಾರಗಳು ಎರಡು ರೀತಿಯಾಗಿವೆ. ಶ್ರೀರಾಮ, ಶ್ರೀಕೃಷ್ಣ, ಶ್ರೀನೃಸಿಂಹ, ಶ್ರೀವಾಮನ ಮೊದಲಾದವುಗಳು ಪೂರ್ಣಾವತಾರವೆನಿಸಿವೆ. ಪರಶುರಾಮ, ವೇದವ್ಯಾಸ, ಬ್ರಹ್ಮ, ರುದ್ರ, ಅಗ್ನಿ, ಕುಬೇರ ಮೊದಲಾದವುಗಳು ಆವೇಶಾವತಾರಗಳಾಗಿವೆ.

ಅಹಂಕಾರಯುಕ್ತರಾದ ಜೀವಾತ್ಮರಲ್ಲಿ ಭಗವಂತನು ತನ್ನ ಒಂದು ಆವೇಶವನ್ನು ಇಡುತ್ತಾನೆ. ನಂತರ ಅವತಾರಕಾರ್ಯವನ್ನು ಮುಗಿಸಿ, ಮತ್ತೆ ಅಂತರ್ಧಾನನಾದನೆಂದರೆ ಅವರು ಎಂದಿನಂತೆ ಸಾಮಾನ್ಯ ಜೀವಾತ್ಮರೇ ಆಗಿರುತ್ತಾರೆ. ಪರಶುರಾಮ ಇದು ಭಗವಂತನ ಆವೇಶಾವತಾರ. ಪರಶುರಾಮ ಎಂಬ ಜೀವಾತ್ಮನಲ್ಲಿ ಭಗವಂತನ ವಿಶೇಷಾವೇಶ ಇದ್ದಾಗ ಇದು ಭಗವಂತನ ಅವತಾರ. ಈ ಪರಶುರಾಮಾವತಾರವು ಶ್ರೀರಾಮಾವತಾರಪರ್ಯಂತ ಕಂಗೊಳಿಸಿತು. ರಾಮ ಪರಶುರಾಮರಿಬ್ಬರೂ ಕೂಡಿದಾಗ ಪರಶುರಾಮರಲ್ಲಿದ್ದ ದಿವ್ಯ ವೈಷ್ಣವತೇಜಸ್ಸು ಶ್ರೀರಾಮನಲ್ಲಿ ಅಂತರ್ಗತವಾಯಿತು. ಆಮೇಲೆ ಚಿರಂಜೀವಿಯಾಗಿ, ಕೇವಲ ಋಷಿಯಾಗಿ ಪರಶುರಾಮ ಉಳಿಯುತ್ತಾನೆ. ಇದರಂತೆ ವೇದವ್ಯಾಸ, ದತ್ತಾತ್ರೇಯ, ಬುದ್ಧ ಅವತಾರಗಳು ವಿಷ್ಣುವಿನ ಆವೇಶದಿಂದ ಕೂಡಿದ ಅವತಾರಗಳು.

ವಿಶಿಷ್ಟಾದ್ವೈತಮತದಲ್ಲಿ ಬುದ್ಧನು ಒಂದು ಕಲ್ಪ ವಿಷ್ಣುವಿನ ಆವೇಶದಿಂದ ಕೂಡಿ ಅವತರಿಸುತ್ತಾನೆ. ಇನ್ನೊಂದು ಕಲ್ಪದಲ್ಲಿ ವಿಷ್ಣುವಿನ ಆವೇಶಾದಿಗಳು ಇಲ್ಲದಿರುವ ಬುದ್ಧನು ಅವತರಿಸುತ್ತಾನೆ. ಕಾರಣ ಪುರಾಣವಚನಗಳಲ್ಲಿ ಕೆಲವು ಕಡೆ ಬುದ್ಧನನ್ನು ದಶಾವತಾರಗಳಲ್ಲಿ ಪರಿಗಣನೆ ಮಾಡುತ್ತಾರೆ. ಇನ್ನು ಕೆಲವು ಕಡೆ ಪರಿಗಣನೆ ಮಾಡುವದಿಲ್ಲ. ಆದ್ದರಿಂದ ಕಲ್ಪಭೇದದಿಂದ ಈ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ.

ಹೀಗೆ ವಿಶಿಷ್ಟಾದ್ವೈತಮತದಲ್ಲಿ ವೇದವ್ಯಾಸ, ಪರಶುರಾಮ, ಬುದ್ಧ ಮುಂತಾದವರು ಸಾಮಾನ್ಯ ಜೀವಾತ್ಮರು.

ಈ ರೀತಿ ವೇದವ್ಯಾಸದೇವರ ಅವತಾರದ ವಿಷಯದಲ್ಲಿ ಅನೇಕಮತಾಚಾರ್ಯರು ಅನೇಕ ವಿಚಾರಗಳನ್ನು ಪ್ರಸ್ತುತಪಡಿಸಿದ್ದಾರೆ.

೧. ಶ್ರೀಮನ್ಮಹಾಭಾರತ, ೨. ವಿಷ್ಣುಪುರಾಣ, ೩. ಪದ್ಮಪುರಾಣ, ೪. ಮತ್ಸ್ಯಪುರಾಣ, ೫. ಸ್ಕಂದಪುರಾಣ ಮೊದಲಾದ ಅನೇಕ ಆಕರಗ್ರಂಥಗಳನ್ನು ನೋಡಿದಾಗ ಶ್ರೀವೇದವ್ಯಾಸದೇವರು ಮಹಾವಿಷ್ಣುವಿನ ಸಾಕ್ಷಾದವತಾರ ಎಂದು ನಿರ್ಣಯವಾಗುತ್ತದೆ.

**೧. ಶ್ರೀಮನ್ನಾರಾಯಣನೇ ಶ್ರೀಮನ್ಮಹಾಭಾರತಕರ್ತಾ**

**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।**
**ಕೋಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃದ್ಭವೇತ್ ॥ ಶಾಂತಿಪರ್ವ - 356. 11**

ಈ ಶ್ಲೋಕ ಮಹಾಭಾರತ ಹಾಗೂ ಇತರಪುರಾಣಗಳಲ್ಲಿಯೂ ಕಂಡುಬರುತ್ತದೆ. ಇದರರ್ಥ- 'ಕೃಷ್ಣ-ದ್ವೈಪಾಯನ ಎಂದು ಪ್ರಸಿದ್ಧರಾದ ವ್ಯಾಸರು ಸಾಕ್ಷಾತ್ ನಾರಾಯಣ ಎಂದು ತಿಳಿ. ಮಹಾಭಾರತದಂತಹ ಹೆಬ್ಬೊತ್ತಿಗೆಯನ್ನು ಪುಂಡರೀಕಾಕ್ಷನಾದ ಶ್ರೀಹರಿಯನ್ನು ಬಿಟ್ಟು ಬೇರಾರೂ ರಚಿಸಲಾರರು'.

ಇದರ ಅಭಿಪ್ರಾಯ ಇಷ್ಟು. ವೇದದಲ್ಲೂ ಹೇಳದ, ಭಗವಂತನ ಬುದ್ಧಿಯಲ್ಲಿ ಇರುವ ವಿಷಯಗಳು ಇಲ್ಲಿವೆ. ಆದ್ದರಿಂದಲೇ ಇದಕ್ಕೆ ಪಂಚಮವೇದ ಎಂದೂ ಕರೆಯುತ್ತಾರೆ. ಇದಲ್ಲದೆ 'ಅನುಕ್ತಂ ಪಂಚಭಿರ್ವೇದೈಃ ನ ವಸ್ತ್ವಸ್ತಿ ಕುತಶ್ಚನ' 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್' ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ ಈ ಮಹಾಭಾರತ. ಇಂತಹ ಗ್ರಂಥವನ್ನು, ಅನಂತವಿಷಯಗಳನ್ನು ಸ್ಪಷ್ಟಾತಿಸ್ಪಷ್ಟವಾಗಿ ತಿಳಿದಿರುವ ನಾರಾಯಣನನ್ನು ಬಿಟ್ಟು ಅನ್ಯರು ಬರೆಯುವುದು ಅಸಾಧ್ಯದ ಮಾತು. ಆದ್ದರಿಂದ ಈ ಗ್ರಂಥವನ್ನು ರಚಿಸಿದ ಭಗವಾನ್ ವೇದವ್ಯಾಸದೇವರು ಸಾಕ್ಷಾತ್ ನಾರಾಯಣನೇ ಎಂದು ಹೇಳಬೇಕು.

ಕೇವಲ ಮಹಾಭಾರತದಂತಹ ಬೃಹದ್ಗ್ರಂಥದ ರಚನೆ ವ್ಯಾಸರಿಗೆ ನಾರಾಯಣತ್ವವನ್ನು ಸಮರ್ಥಿಸುವುದು ಮಾತ್ರವಲ್ಲ. ಭಾರತಕ್ಕಿಂತಲೂ ಪರಮಪ್ರಮಾಣವಾದ ಬ್ರಹ್ಮಸೂತ್ರಗಳ ರಚನೆ, ಅನಂತವೇದಗಳ ಉದ್ಧಾರ, ಪುರಾಣಗಳ ಸಂಗ್ರಹ ಇವುಗಳೆಲ್ಲ ವ್ಯಾಸರ ನಾರಾಯಣತ್ವವನ್ನು ಪೋಷಿಸುತ್ತವೆ.

### ಬ್ರಹ್ಮಸೂತ್ರಗಳ ರಚನೆ

ವೇದಗಳು ಅನಂತ. ಪ್ರಳಯಸಮುದ್ರವನ್ನು ಪುಟ್ಟ ದೋಣಿಯಿಂದ ದಾಟುವುದು ಅಶಕ್ಯ. ಅದರಂತೆ ಅಲ್ಪಶಾಖೆಗಳನ್ನು ತಿಳಿದ ಮನುಷ್ಯರಿಗೆ ಅನಂತವೇದಗಳ ಸಮನ್ವಯ ಅಸಾಧ್ಯವಾದ ಕಾರ್ಯ. ಆದರೆ ಅಗಾಧವಾದ ಪ್ರಳಯಜಲವು ಬೃಹತ್ಕಾಯನಾದ ಭಗವಂತನ ರೋಮಕೂಪದಲ್ಲಿ ಸೇರಿಕೊಳ್ಳುವಂತೆ; ಇತರರಿಗೆ ಅಸಾಧ್ಯವಾದ ಅನಂತವೇದಗಳ ಸಮನ್ವಯ ಸಾಕ್ಷಾತ್ ನಾರಾಯಣಾವತಾರರಾದ ವ್ಯಾಸರಿಗೆ ಸುಲಭಸಾಧ್ಯವಾಗಿದೆ. ಅನಂತವೇದಾರ್ಥವು ಅವರ ಅಪರಿಮಿತವಾದ ಬುದ್ಧಿಯಲ್ಲಿ ಅನಂತವಾದ ಅವ್ಯಾಕೃತಾಕಾಶದ ಮುಂದೆ ಪರಮಾಣುವಿನಾಕಾರದ ಬೆಳಕಿನ ಚುಕ್ಕಿಯಂತೆ ಅಡಗಿಕೊಂಡಿದೆ.

ಆದ್ದರಿಂದ ಅನಂತಜ್ಞಾನಸೂರ್ಯರಾದ ವ್ಯಾಸರೇ, ಅನನ್ಯಸಾಮಾನ್ಯವಾದ ತಮ್ಮ ಪ್ರತಿಭೆಯಿಂದ ಅನಂತವೇದರಾಶಿಯ ಅರ್ಥವನ್ನು ನಿರ್ಣಯಿಸುವ ಬ್ರಹ್ಮಸೂತ್ರನಿರ್ಮಾಣವೆಂಬ ಕುಶಲ ಕೈಗಾರಿಕೆಯಲ್ಲಿ ನಿಸ್ಸೀಮರು. ಅತ್ಯಂತ ಸಂಕ್ಷಿಪ್ತವಾದ ಸೂತ್ರಾವಯವದಲ್ಲಿ ಬ್ರಹ್ಮಾಂಡದಂತಹ ಅರ್ಥವನ್ನು ಹುದುಗಿಸಿ ಹೇಳುವ, ಅನಂತವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳ ನಿರ್ಮಾಣವನ್ನು ನಾರಾಯಣಾಭಿನ್ನರಾದ ವ್ಯಾಸರನ್ನು ಬಿಟ್ಟು ಇನ್ನಾರು ತಾನೆ ಮಾಡಲು ಸಾಧ್ಯ? ಆದ್ದರಿಂದ ಬ್ರಹ್ಮಸೂತ್ರಗಳ ನಿರ್ಮಾಣವೂ ವ್ಯಾಸರು ನಿಃಸಂಶಯವಾಗಿ ಸಾಕ್ಷಾನ್ನಾರಾಯಣನ ಅವತಾರ ಎಂದು ಸಮರ್ಥಿಸುತ್ತದೆ.

### ವೇದಗಳ ವಿಭಾಗ

ವೇದವಿಭಾಗವೂ ಕೃಷ್ಣದ್ವೈಪಾಯನರು ಸಾಕ್ಷಾತ್ ಶ್ರೀಹರಿಯ ಅವತಾರ ಎಂಬುವುದಕ್ಕೆ ಪೋಷಕವಾಗುತ್ತದೆ. ಭಗವದವತಾರರಾದ ವ್ಯಾಸರನ್ನು ಬಿಟ್ಟು ಅನೇಕ ದೇವತೆಗಳು, ಋಷಿಗಳು ವ್ಯಾಸರಾಗಿ ಅವತರಿಸಿ ವೇದವಿಭಾಗ ಮಾಡಿದ್ದು ಪುರಾಣಗಳಲ್ಲಿ ಕಂಡುಬರುತ್ತದೆ. ಆದರೆ ಆ ಎಲ್ಲ ವ್ಯಾಸರು

ಅನ್ಯನಿರಪೇಕ್ಷವಾಗಿ, ಯಾರ ಮಾರ್ಗದರ್ಶನವಿಲ್ಲದೆ ವೇದವಿಭಾಗ ಮಾಡಲು ಅಸಮರ್ಥರು. ಶ್ರೀಹರ್ಯವತಾರರಾದ ವ್ಯಾಸರು ಮಾಡಿದ ವೇದವಿಭಾಗವನ್ನು ದೃಷ್ಟಾಂತವಾಗಿ ಇಟ್ಟುಕೊಂಡು ಅಥವಾ ನೇರವಾಗಿ ಭಗವದವತಾರರಾದ ವ್ಯಾಸರ ಮಾರ್ಗದರ್ಶನದಲ್ಲಿಯೇ ವೇದಗಳನ್ನು ವಿಭಾಗಿಸುತ್ತಾರೆ. ಇದನ್ನು ಆಚಾರ್ಯರು ಭಾಗವತತಾತ್ಪರ್ಯವಲ್ಲಿ ನಮಗೆ ತಿಳಿಸುತ್ತಾರೆ-

ತೃತೀಯೇ ಸಪ್ತಮೇ ಚೈವ ಷೋಡಶೇ ಪಂಚವಿಂಶಕೇ ।
ಅಷ್ಟಾವಿಂಶೇ ಯುಗೇ ಕೃಷ್ಣಃ ಸತ್ಯವತ್ಯಾಮಜಾಯತ ॥

ವ್ಯಾಸಾಚಾರ್ಯಸ್ತು ಪೂರ್ವೇಷು ಚರಮೇ ಸ್ವಯಮೇವ ತು ।
ವಿವ್ಯಾಸ ವೇದಾನ್ ಚಕ್ರೇ ಚ ಭಾರತಂ ವೇದಸಂಮಿತಮ್ ॥ ಭಾಗ.ತಾ.2.7.36

*ವಿಜಯಧ್ವಜೀಯ-'ಏತದುಕ್ತಂ ಭವತಿ । ತೃತೀಯೇ ಸಪ್ತಮೇ ಷೋಡಶೇ ಪಂಚವಿಂಶೇ ಅಷ್ಟಾವಿಂಶೇ ಚ ದ್ವಾಪರೇ ಪೂರ್ವೇಷು ಚ ಅನ್ಯೈಃ ವ್ಯಾಸನಾಮಭಿಃ ವಿಭಾಜಯಿಷ್ಯತಿ । ಅಷ್ಟಾವಿಂಶೇ ಸ್ವಯಮೇವ ವಿಭಜಿಷ್ಯತೀತಿ'*

*ಯಾದುಪತ್ಯಮ್-'ಪೂರ್ವೇಷು ತೃತೀಯಸಪ್ತಮಷೋಡಶಪಂಚವಿಂಶಕಮಹಾಯುಗಾಂತರ್ಗತದ್ವಾಪರೇಷು ವ್ಯಾಸಾನಾಂ ವೇದವಿಸ್ತಾರಕರ್ತೃಣಾಂ ಅನ್ಯೇಷಾಂ ಸ್ವಯಮಾಚಾರ್ಯಃ । ಚರಮೇ ಅಷ್ಟಾವಿಂಶಮಹಾಯುಗಾಂತರ್ಗತ ದ್ವಾಪರೇ ಪೂರ್ವವ್ಯಾಸಾಪೇಕ್ಷಯಾ ವಿಶೇಷೇಣ ವಿವ್ಯಾಸ ವಿಸ್ತೃತವಾನ್'*

'ವೈವಸ್ವತಮನ್ವಂತರದಲ್ಲಿ ಮೂರು, ಏಳು, ಹದಿನಾರು, ಇಪ್ಪತ್ತೈದು, ಇಪ್ಪತ್ತೆಂಟನೆಯ ದ್ವಾಪರಗಳ ಕೊನೆಯಲ್ಲಿ ಶ್ರೀಹರಿಯು ಸತ್ಯವತಿಯಲ್ಲಿ ವ್ಯಾಸನಾಗಿ ಅವತರಿಸಿದ. ಮೊದಲಿನ ನಾಲ್ಕು (೩-೨೫)ಯುಗಗಳಲ್ಲಿ ಈಗಾಗಲೇ ಬೇರೆಯವರು ವ್ಯಾಸರಾಗಿ ಅವತರಿಸಿದ್ದಾರೆ. ಆಗ ನಾರಾಯಣಾವತಾರರಾದ ವ್ಯಾಸರು 'ವ್ಯಾಸಾಚಾರ್ಯರು' ಎಂದರೆ ವ್ಯಾಸರಾಗಿ ಅವತರಿಸಿದ ಬೇರೆಯವರಿಗೆ ಗುರುಗಳಾಗಿರುತ್ತಾರೆ. ಅರ್ಥಾತ್ ವೇದವಿಭಾಗ ಮಾಡುವುದಕ್ಕೆ ಮಾರ್ಗದರ್ಶನ ಮಾಡುತ್ತಾರೆ. ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಮಾತ್ರ ಶ್ರೀಹರಿಯೇ 'ವ್ಯಾಸ'ನಾಗಿ ವೇದವಿಭಾಗ ಮಾಡುತ್ತಾನೆ. ವೇದಸಮಾನಾರ್ಥಕವಾದ ಭಾರತವನ್ನು ರಚಿಸುತ್ತಾನೆ.

ಆಚಾರ್ಯರು ಹೇಳುವ ಈ ಮಾತನ್ನು ವಿಷ್ಣುಪುರಾಣ ಹಾಗೂ ಅವುಗಳ ವ್ಯಾಖ್ಯಾನಗಳೂ ತುಂಬ ಸ್ಪಷ್ಟವಾಗಿ, ಸೊಗಸಾಗಿ ಸಮರ್ಥಿಸುತ್ತವೆ.

ತತೋಽತ್ರ ಮತ್ಸುತೋ ವ್ಯಾಸೋ ಅಷ್ಟಾವಿಂಶತಿಮೇಽಂತರೇ ।
ವೇದಮೇಕಂ ಚತುಷ್ಪಾದಂ ಚತುರ್ಧಾ ವ್ಯಭಜತ್ಪ್ರಭುಃ ॥

ಯಥಾ ಚ ತೇನ ವೈ ವ್ಯಸ್ತಾಃ ವೇದವ್ಯಾಸೇನ ಧೀಮತಾ ।
ವೇದಾಸ್ತಥಾ ಸಮಸ್ತೈಸ್ತೈಃ ವ್ಯಸ್ತಾ ವ್ಯಸ್ತೈಸ್ತಥಾ ಮಯಾ ॥

ತದನೇನೈವ ವೇದಾನಾಂ ಶಾಖಾಭೇದಾನ್ ದ್ವಿಜೋತ್ತಮ ।
ಚತುರ್ಯುಗೇಷು ಪಠಿತಾನ್ ಸಮಸ್ತೇಷ್ವವಧಾರಯ ॥ 3.4.2-4 ॥

ಶ್ರೀಧರಸ್ವಾಮಿ-''ಸ ಏವ ವ್ಯಾಸರೂಪೋ ಭೂತ್ವಾ ಬಹುಭಿಃ ವೇದೈಃ ಸಶಾಖಂ ವೇದಂ ಕರೋತಿ । ಯತೋ ಜ್ಞಾನಸ್ವರೂಪೋಽಸೌ ಭಗವಾಂಶ್ಚಾನಂತಶ್ಚ । ಅನಂತತೋ ಅನಂತವೇದಶಾಖಾತ್ಮಕತ್ವಾತ್ ಪ್ರಣೇತೃತ್ವಂ ಚ ತಸ್ಯೈವೋಪಪದ್ಯತೇ ನಾನ್ಯಸ್ಯೇತ್ಯರ್ಥಃ । ಅತ ಏವ ವಕ್ಷ್ಯತಿ- 'ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್' ಇತಿ ॥ 3.3.31''

'ಆ ವಾಸುದೇವನೇ ವೇದವ್ಯಾಸನಾಗಿ ಅವತರಿಸಿ ಅನಂತವಾದ ವೇದಗಳನ್ನು ಅನೇಕಶಾಖೆಗಳನ್ನಾಗಿ ವಿಭಾಗಿಸುತ್ತಾನೆ. ಆ ಭಗವಂತನು ಜ್ಞಾನಸ್ವರೂಪ, ಐಶ್ವರ್ಯಾದಿಗುಣಸಂಪನ್ನ, ಅನಂತನೂ ಆಗಿದ್ದಾನೆ. ಆದ್ದರಿಂದ ಅನಂತವೇದಗಳನ್ನು ಚಿಕ್ಕ ಚಿಕ್ಕ ಶಾಖೆಗಳಾಗಿ ವಿಭಾಗಿಸುವದಕ್ಕೆ ಅನಂತಜ್ಞಾನನಿಧಿಯಾದ ನಾರಾಯಣನಿಗೆ ಮಾತ್ರ ಸಾಧ್ಯ'

ವಿಷ್ಣುಚಿತ್ತೀಯ- ॥ ತದಿತಿ ॥ ಅನೇನ ವರ್ತಮಾನೇನ ನಾರಾಯಣಾಂಶೇನ ದ್ವೈಪಾಯನೇನ ನಿದರ್ಶನಭೂತೇನ ಸಮಸ್ತೇಷು ಚತುರ್ಯುಗೇಷು ವೇದಪಾರಗೈರೇವ ಶಾಖಾಭೇದಾನ್ ರಚಿತಾನವಧಾರಯೇತ್ಯರ್ಥಃ ॥

*ಶ್ರೀಧರಸ್ವಾಮಿ- ॥ ತದಿತಿ ॥ ತತ್ ತಸ್ಮಾದನೇನೈವ ವರ್ತಮಾನಕೃಷ್ಣದ್ವೈಪಾಯನಕೃತೇನ ವೇದವಿಭಾಗೇನ ನಿದರ್ಶನಭೂತೇನ ಸರ್ವೇಷ್ವಪಿ ಚತುರ್ಯುಗೇಷು ವೇದಾನಾಂ ಶಾಖಾಭೇದಾನ್ ಪೂರ್ವೈರ್ವ್ಯಾಸೈಃ ಅಪಿ ಕೃತಾನ್ ಜಾನೀಹಿ ॥*

ವಿಷ್ಣುಪುರಾಣ ಹಾಗು ವ್ಯಾಖ್ಯಾನಗಳ ಅಭಿಪ್ರಾಯ. 'ಆ ವಾಸುದೇವನೇ ಕೃಷ್ಣದ್ವೈಪಾಯನನಾಗಿ ಅವತರಿಸಿ ಅನಂತವಾದ ವೇದಗಳನ್ನು ಅನೇಕಶಾಖೆಗಳನ್ನಾಗಿ ವಿಭಾಗಿಸುತ್ತಾನೆ. ಅನಂತವೇದಗಳನ್ನು ವಿಭಾಗಿಸುವದಕ್ಕೆ ಅನಂತಜ್ಞಾನನಿಧಿಯಾದ ನಾರಾಯಣನಿಗೆ ಮಾತ್ರ ಸಾಧ್ಯ. ಬೇರೆ ವ್ಯಾಸರು, ಕೃಷ್ಣದ್ವೈಪಾಯನರ ವೇದವಿಭಾಗವನ್ನು ಉಪಜೀವಿಸಿಕೊಂಡೇ ವೇದವಿಭಾಗವನ್ನು ಮಾಡುತ್ತಾರೆ. ಹೀಗಾಗಿ ಇಪ್ಪತ್ತೇಳು ದ್ವಾಪರಗಳಲ್ಲಿ ಆಗುವ ವ್ಯಾಸರು ಶ್ರೀಹರ್ಯವತಾರರಾದ ವ್ಯಾಸರನ್ನು ಉಪಜೀವಿಸಿಕೊಂಡೇ ವೇದವಿಭಾಗಗಳನ್ನು ಮಾಡುತ್ತಾರೆ. ನಾರಾಯಣಾವತಾರರಾದ ವ್ಯಾಸರು ಮಾತ್ರ ಯಾರನ್ನೂ ಉಪಜೀವಿಸದೆ, ಸ್ವತಂತ್ರವಾಗಿ ಎಲ್ಲ ವಿಧವಾದ ವೇದಗಳ (ಮೂಲವೇದ, ಉಪವೇದ, ಅವಾಂತರವೇದ) ಉದ್ಧಾರವನ್ನು, ವಿಭಾಗವನ್ನು ಮಾಡುತ್ತಾರೆ'.

ಆದ್ದರಿಂದ ಸ್ವತಂತ್ರವಾಗಿ ಅನ್ಯರನ್ನು ಉಪಜೀವಿಸದೇ ಅನಂತ ವೇದಗಳ ವಿಭಾಗಮಾಡಿರುವದರಿಂದಲೂ ಕೃಷ್ಣದ್ವೈಪಾಯನರು ಸಾಕ್ಷಾತ್ ನಾರಾಯಣನ ಅವತಾರ ಎಂದು ಸಿದ್ಧವಾಗುತ್ತದೆ.

**ಪುರಾಣಸಂಗ್ರಹ**

ಸೃಷ್ಟಿಯ ಆದಿಕಾಲದಲ್ಲಿ ನೂರುಕೋಟಿಶ್ಲೋಕಾತ್ಮಕವಾದ ಒಂದೇ ಪುರಾಣ ಇತ್ತು. ಕಾಲಕಳೆದಂತೆ ಆ ಪುರಾಣವು ಕಣ್ಮರೆಯಾಗಿ ಹೋಯಿತು. ಆಗ ನಾರಾಯಣನೇ ಹಯಗ್ರೀವ ರೂಪದಿಂದ ಪುರಾಣಗ್ರಂಥವನ್ನು ಬ್ರಹ್ಮದೇವರಿಗೆ ಉಪದೇಶಿಸಿದ. ಪುನಃ ಕಾಲಬಲದಿಂದ ಮಂದಬುದ್ಧಿಗಳಾದ ಮನುಷ್ಯರ ಕೈಗೆಟಕುವಂತೆ ಮಾಡಲು ನಾರಾಯಣನೇ ವ್ಯಾಸನಾಗಿ ಅವತರಿಸಿ ನೂರುಕೋಟಿಶ್ಲೋಕಾತ್ಮಕ ಪುರಾಣವನ್ನು ಕೇವಲ ನಾಲ್ಕುಲಕ್ಷಶ್ಲೋಕಗಳಲ್ಲಿ ಸಂಗ್ರಹಿಸಿದನು.

ಗೀತಾಭಾಷ್ಯದಲ್ಲಿ ಆಚಾರ್ಯರು ದಧೀಚಿಮೊದಲಾದವರು ಪಾಶುಪತ, ಶಾಕ್ತ ಮೊದಲಾದ ಆಗಮಗಳಿಗೆ ಅನುಗುಣವಾಗಿ ಒಂದೊಂದು ಪುರಾಣ ರಚಿಸಿದ್ದಾಗಿ ಹೇಳಿದ್ದಾರೆ. ಆದರೆ ನೂರುಕೋಟಿಶ್ಲೋಕಾತ್ಮಕವಾದ ಪುರಾಣದಿಂದ ಪುರಾಣಸಂಗ್ರಹಮಾಡಿದ್ದು ನಾರಾಯಣಾವತಾರರಾದ ವ್ಯಾಸರು ಮಾತ್ರ. ಮತ್ಸ್ಯಪುರಾಣ ಮೊದಲಾದವುಗಳು ಇದನ್ನು ದಾಖಲಿಸುತ್ತವೆ.

ಒಟ್ಟಾರೆ, ಅನಂತವೇದಾರ್ಥನಿರ್ಣಾಯಕ ಬ್ರಹ್ಮಸೂತ್ರಗಳ ರಚನೆ ನಾರಾಯಣಾವತಾರರಾದ ವ್ಯಾಸರಿಗೆ ಮಾತ್ರ ಸಾಧ್ಯ. ಭಗವದತಾರರಾಗದ ವ್ಯಾಸರು ವೇದವ್ಯಾಸರನ್ನು ಉಪಜೀವಿಸಿಕೊಂಡು ವೇದವಿಭಾಗ ಮಾಡಿದರೂ, ಶ್ರೀಹರ್ಯವತಾರರಾದ ವ್ಯಾಸರು ಮಾತ್ರ ಅನ್ಯರನು ಉಪಜೀವಿಸದೆ, ಮೂಲವೇದಗಳ ಉದ್ಧಾರವನ್ನು, ವೇದಗಳ ವಿಭಾಗವನ್ನು ಮಾಡುತ್ತಾರೆ. ಆದ್ದರಿಂದ ಯಾರನ್ನೂ ಉಪಜೀವಿಸದೆ ಮಾಡುವ ವೇದಗಳ ವಿಭಾಗವೂ ನಾರಾಯಣವತಾರರಾದ ವ್ಯಾಸರಿಗೆ ಮಾತ್ರ ಸಾಧ್ಯವಾಗುವ ಕಾರ್ಯ ಎಂದಾಯಿತು. ನೂರುಕೋಟಿಶ್ಲೋಕಾತ್ಮಕವಾದ ಪುರಾಣವನ್ನು ಕೇವಲ ನಾಲ್ಕುಲಕ್ಷಶ್ಲೋಕಗಳಲ್ಲಿ ಸಂಗ್ರಹಿಸಿದ್ದೂ ನಾರಾಯಣಾವತಾರರಾದ ವ್ಯಾಸರೇ.

ಹೀಗೆ, ೧. ಅನಂತವೇದನಿರ್ಣಾಯಕವಾದ ಬ್ರಹ್ಮಸೂತ್ರಗಳು, ೨. ಅನಂತವೇದವಿಭಾಗ, ೩. ಲಕ್ಷಶ್ಲೋಕಾತ್ಮಕವಾದ ಮಹಾಭಾರತ, ೪. ನೂರುಕೋಟಿಶ್ಲೋಕಾತ್ಮಕವಾದ ಪುರಾಣವನ್ನು ಕೇವಲ ನಾಲ್ಕುಲಕ್ಷಶ್ಲೋಕಗಳಲ್ಲಿ ಸಂಗ್ರಹಿಸಿದ ಪುರಾಣ ಈ ಚತುರ್ಗ್ರಂಥಗಳೆಂಬ ಚತುಃಸ್ತಂಭಗಳು ಬಾದರಾಯಣರು ಸಾಕ್ಷಾನ್ನಾರಾಯಣ ಎಂದು ಸಮರ್ಥವಾಗಿ ಸಾಧಿಸುತ್ತವೆ.

೨. ಪದ್ಮಪುರಾಣದಲ್ಲಿ ಎರಡು ಪ್ರಸಂಗಗಳಲ್ಲಿ ವೇದವ್ಯಾಸರ ಅವತಾರ ಹಾಗೂ ಗ್ರಂಥರಚನೆಯ ಕುರಿತಾಗಿ ಹೇಳಲಾಗಿದೆ. ಮೊದಲನೆಯದು ವಾಸುದೇವಸಹಸ್ರನಾಮ. ಇದು ಪದ್ಮಪುರಾಣದ ಉತ್ತರಖಂಡದಲ್ಲಿ ಬರುವ ಸ್ತೋತ್ರ. ಈ ಶ್ಲೋಕದಲ್ಲಿ 'ಆಶ್ರಮಾತ್ಮಾ ಪುರಾಣರ್ಷಿಃ' ಎಂಬ ಪಾಠವು ಇಂದು ಮುದ್ರಿತವಾದ ಪದ್ಮಪುರಾಣದಲ್ಲಿ ಕಂಡು ಬರುತ್ತದೆ. ಆದರೆ ಟೀಕಾಕೃತ್ಪಾದರು ಪ್ರಮೇಯದೀಪಿಕಾದಲ್ಲಿ 'ಅ ಆ ಅಂ ಅಃ ಪುರಾಣರ್ಷಿಃ ವ್ಯಾಸಃ ಶಾಖಾಸಹಸ್ರಕೃತ್' ಎಂಬ ಪಾಠವನ್ನು ಪರಿಗ್ರಹಿಸಿದ್ದಾರೆ. ಆದ್ದರಿಂದ ಮುದ್ರಿತವಾದ ಪಾಠ ಪ್ರಕ್ಷಿಪ್ತ ಎನ್ನಬೇಕು.

'ಅ ಆ ಅಂ ಅಃ ಪುರಾಣರ್ಷಿಃ ವ್ಯಾಸಃ ಶಾಖಾಸಹಸ್ರಕೃತ್ ।
ಮಹಾಭಾರತನಿರ್ಮಾತಾ ಕವೀಂದ್ರೋ ಬಾದರಾಯಣಃ ॥

ಕೃಷ್ಣದ್ವೈಪಾಯನಃ ಸರ್ವಪುರುಷಾರ್ಥೈಕಬೋಧಕಃ ।
ವೇದಾಂತಕರ್ತಾ ಬ್ರಹ್ಮೈಕವ್ಯಂಜಕಃ ಪುರುವಂಶಕೃತ್ ॥ ಪಾದ್ಮ. ಉ.ಖಂ. 71.275-276 ।

ಮೇಲೆ ಉದಾಹರಿಸಿದ ವಾಸುದೇವಸಹಸ್ರನಾಮವು ಸಾಕ್ಷಾತ್ ನಾರಾಯಣನ ಸ್ತುತಿಗಾಗಿ ಹೊರಟಿದ್ದು. ಅಂತಹ ಸ್ತೋತ್ರದಲ್ಲಿ ಕೃಷ್ಣದ್ವೈಪಾಯನರ ಸ್ತೋತ್ರ ಮಾಡಿದ್ದರಿಂದ ಕೃಷ್ಣದ್ವೈಪಾಯನರು ಸಾಕ್ಷಾನ್ನಾರಾಯಣನ ಅವತಾರ ಎಂದು ನಿರವಕಾಶವಾಗಿ ಸಿದ್ಧವಾಗುತ್ತದೆ.

ಇನ್ನು ಸೃಷ್ಟಿಖಂಡದಲ್ಲಿ ವೇದವ್ಯಾಸದೇವರ ಅವತಾರ ಹಾಗು ಪ್ರಯೋಜನಗಳನ್ನು ಹೇಳುತ್ತಾ ವ್ಯಾಸರು ಸಾಕ್ಷಾತ್ ನಾರಾಯಣನ ಅವತಾರ ಎಂದು ಸ್ಫುಟವಾಗಿ ನಿರೂಪಿಸುತ್ತಾರೆ.

ಅರಣೀವ ಹುತಾಶಸ್ಯ ನಿಮಿತ್ತಂ ಪುಣ್ಯಜನ್ಮನಃ ।
ತಸ್ಯಾಂ ಬಭೂವ ಪೂತಾತ್ಮಾ ಮಹರ್ಷಿಸ್ತು ಪರಾಶರಾತ್ ॥

ಮಾನವಚ್ಛದ್ಮರೂಪಾಯ ವಿಷ್ಣವೇ ಶಂಸಿತಾತ್ಮನೇ ।
ಜಾತಮಾತ್ರಂ ಚ ಯಂ ವೇದ ಉಪತಸ್ಥೇ ಸಸಂಗ್ರಹಃ ॥

ಮತಿಮಂಥಾನಮಾವಿಧ್ಯ ಯೇನಾಸೌ ಶ್ರುತಿಸಾಗರಾತ್ ।
ಪ್ರಕಾಶೋ ಜನಿತೋ ಲೋಕೇ ಮಹಾಭಾರತಚಂದ್ರಮಾಃ ॥

ಭಾರತಂ ಭಾನುಮಾನ್ ವಿಷ್ಣುರ್ಯದಿ ನ ಸ್ಯುರಮೀ ತ್ರಯಃ ।
ತತೋಽಜ್ಞಾನತಮೋಽಂಧಸ್ಯ ಕಾಽವಸ್ಥಾ ಜಗತೋ ಭವೇತ್ ॥

ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।
ಕೋ ಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃದ್ಭವೇತ್ ॥ 1.ಸೃಷ್ಟಿ.1.38-43 ॥

*'ಬನ್ನಿಯ ಗಿಡದ ಕೊರಡಿನಿಂದ ಅಗ್ನಿಯು ಜನಿಸುವಂತೆ ಸತ್ಯವತಿಯನ್ನು ನಿಮಿತ್ತ ಮಾಡಿಕೊಂಡು ಭಗವಾನ್ ವೇದವ್ಯಾಸರು ಅವತರಿಸಿದರು. ವ್ಯಾಸರು ಅವತರಿಸಿದ ಕೂಡಲೇ ಎಲ್ಲ ಸಾಂಗವಾದ ಅನಂತವೇದಗಳು ಮೂರ್ತಿಮತ್ತಾಗಿ ಎದುರಿಗೆ ಬಂದು ನಿಂತು ನಮಸ್ಕರಿಸಿದವು. ವೇದವ್ಯಾಸದೇವರು ವೇದವೆಂಬ ಸಮುದ್ರವನ್ನು ತಮ್ಮ ಬುದ್ಧಿಯ ಕಡಗೋಲಿನಿಂದ ಕಡೆದು, ಮಹಾಭಾರತವೆಂಬ ಚಂದ್ರನನ್ನು ಪಡೆದು, ಜಗತ್ತಿಗೆಲ್ಲ ಜ್ಞಾನದ ಹೊನಲನ್ನು ಹರಿಸಿದರು. ಭಾರತವನ್ನು ಬರೆದ ವಿಷ್ಣು, ಮಹಾಭಾರತ, ಸೂರ್ಯ ಈ ಮೂರು ಇರದಿದ್ದರೆ ಸಮಸ್ತ ಪ್ರಪಂಚ ಗತಿಶೀಲತೆಯನ್ನು ಕಳೆದುಕೊಳ್ಳುತ್ತಿತ್ತು. ಅಜ್ಞಾನದಿಂದ ತೊಳಲುವ, ಕತ್ತಲೆಯಿಂದ ಬಳಲುವ ಜೀವರಾಶಿಗಳಿಗೆ ಅಂತಃಪ್ರಜ್ಞೆ, ಬಾಹ್ಯಪ್ರಜ್ಞೆ ನೀಡಿ ಸಲಹುವವರು ಯಾರೂ ಇರಲಿಲ್ಲ. ಸಮಸ್ತಜೀವರಾಶಿಯನ್ನು ಸಲಹುವುದಕ್ಕೆ ಭಾರತವೆಂಬ ಬೆಳಕಿನ ನಿಧಿಯನ್ನು ಪ್ರಪಂಚಕ್ಕೆ ನೀಡಿದ ದ್ವೈಪಾಯನರು ಸೂರ್ಯಚಂದ್ರರನ್ನು ಜಗತ್ತಿಗೆ ನೀಡಿದ ನಾರಾಯಣನೇ ಎಂಬುವದರಲ್ಲಿ ಸಂದೇಹವಿಲ್ಲ.'*

೩. ವಿಷ್ಣುಪುರಾಣವೂ 'ಕೃಷ್ಣದ್ವೈಪಾಯನಂ ವ್ಯಾಸಂ' ಎಂಬ ಶ್ಲೋಕದ ಮೂಲಕ ವ್ಯಾಸರು ಸಾಕ್ಷಾತ್ ಶ್ರೀಮನ್ನಾರಾಯಣನೇ ಎಂದು ಸಮರ್ಥಿಸುತ್ತದೆ.

ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।
ಕೋ ಹ್ಯನ್ಯೋ ಭುವಿ ಮೈತ್ರೇಯ ಮಹಾಭಾರತಕೃದ್ಭವೇತ್ ॥ ವಿಷ್ಣುಪುರಾಣ- ೩.೪.೫

ವಿಷ್ಣುಪುರಾಣದಲ್ಲಿ ಬಂದ ಶ್ಲೋಕದ ಆನುಪೂರ್ವಿಯಲ್ಲಿ ಸ್ವಲ್ಪ ವ್ಯತ್ಯಾಸ ಕಂಡುಬಂದರೂ ಪ್ರಮೇಯದಲ್ಲಿ ಯಾವ ಬದಲಾವಣೆಯಿಲ್ಲ. ಇಲ್ಲಿ ಒಂದು ವಿಶೇಷ ಇದೆ. 'ಆತ್ಮಪ್ರಕಾಶ' ಇದು ವಿಷ್ಣುಪುರಾಣಕ್ಕೆ ಅದ್ವೈತಮತಾನುಸಾರಿಯಾದ ವ್ಯಾಖ್ಯಾನ. ಈ ವ್ಯಾಖ್ಯಾನವನ್ನು ಶ್ರೀಧರಸ್ವಾಮಿಯು ಬರೆದಿದ್ದಾರೆ. ಇವರು ತಮ್ಮ ವ್ಯಾಖ್ಯಾನದಲ್ಲಿ 'ವ್ಯಾಸರು ಸಾಕ್ಷಾತ್ ನಾರಾಯಣ' ಎಂದು ಸಮರ್ಥಿಸುವುದಕ್ಕೆ ಹೊಸದಾದ ಯುಕ್ತಿಯನ್ನು ಹೇಳುತ್ತಾರೆ.

ಸ ಭಿದ್ಯತೇ ವೇದಮಯಃ ಸ್ವವೇದಂ ಕರೋತಿ ಭೇದ್ಯೈಃ ಬಹುಭಿಃ ಸಶಾಖಮ್ ।
ಶಾಖಾಪ್ರಣೇತಾ ಸ ಸಮಸ್ತಶಾಖಾಜ್ಞಾನಸ್ವರೂಪೋ ಭಗವಾನಸಂಗಃ ॥ ವಿ.ಪು. 3.3.31.

**ವ್ಯಾಖ್ಯಾನ-**

''ಸ ಏವ ವ್ಯಾಸರೂಪೋ ಭೂತ್ವಾ ಬಹುಭಿಃ ವೇದ್ಯೈಃ ಸಶಾಖಂ ವೇದಂ ಕರೋತಿ ।..ಯತೋ ಜ್ಞಾನಸ್ವರೂಪೋಽಸೌ ಭಗವಾಂಶ್ಚಾನಂತಶ್ಚ । ಅನಂತತೋ ಅನಂತವೇದಶಾಖಾತ್ಮಕತ್ವಾತ್ ಪ್ರಣೇತೃತ್ವಂ ಚ ತಸ್ಯೈವೋಪಪದ್ಯತೇ ನಾನ್ಯಸ್ಯೇತ್ಯರ್ಥಃ । ಅತ ಏವ ವಕ್ಷ್ಯತಿ- 'ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್' ಇತಿ ।''

'ಆ ವಾಸುದೇವನೇ ವೇದವ್ಯಾಸನಾಗಿ ಅವತರಿಸಿ ಅನಂತವಾದ ವೇದಗಳನ್ನು ಅನೇಕಶಾಖೆಗಳನ್ನಾಗಿ ವಿಭಾಗಿಸುತ್ತಾನೆ. ಆ ಭಗವಂತನು ಜ್ಞಾನಸ್ವರೂಪ, ಐಶ್ವರ್ಯಾದಿಗುಣಸಂಪನ್ನ, ಅನಂತನು ಆಗಿದ್ದಾನೆ. ಆದ್ದರಿಂದ ಅನಂತವೇದಗಳನ್ನು ಚಿಕ್ಕ ಚಿಕ್ಕ ಶಾಖೆಗಳಾಗಿ ವಿಭಾಗಿಸುವದಕ್ಕೆ ಅನಂತಜ್ಞಾನನಿಧಿಯಾದ ನಾರಾಯಣನಿಗೆ ಮಾತ್ರ ಸಾಧ್ಯ'

ಇಲ್ಲಿ ಹೇಳಿದ ಯುಕ್ತಿ ಇಷ್ಟು. ಯಾವರೀತಿ 'ಮಹಾಭಾರತದಂತಹ ಹೆಬ್ಬೊತ್ತಿಗೆಯನ್ನು ಪುಂಡರೀಕಾಕ್ಷನಾದ ಶ್ರೀಹರಿಯನ್ನು ಬಿಟ್ಟು ಬೇರಾರೂ ರಚಿಸಲಾರರು. ಆದ್ದರಿಂದ ಭಾರತವನ್ನು ರಚಿಸಿದ ವ್ಯಾಸರು ನಾರಾಯಣನೇ' ಎಂಬ ನಿರ್ಣಯಕ್ಕೆ ಬರುತ್ತೇವೆ. ಹಾಗೆ 'ಅನಂತವೇದಗಳ ವಿಭಾಗ ಮಾಡುವ ಸಾಮರ್ಥ್ಯ ಸರ್ವಜ್ಞಶಿಖಾಮಣಿಯಾದ ನಾರಾಯಣನಿಗೆ ಮಾತ್ರ ಸಾಧ್ಯ. ಆದ್ದರಿಂದ ಅನಂತವೇದವಿಭಾಗ ಮಾಡಿದ ವ್ಯಾಸರೂ ನಾರಾಯಣನೇ' ಎಂಬ ನಿರ್ಣಯ ಕೈಕೊಳ್ಳಬೇಕು. ಇದು ಶ್ರೀಧರಸ್ವಾಮಿಯು ಹೇಳುವ ಯುಕ್ತಿ.

೪. ಮತ್ಸ್ಯಪುರಾಣವೂ ವ್ಯಾಸರು ಶ್ರೀಹರಿಯ ಅವತಾರ ಎನ್ನುವದಕ್ಕೆ ಪ್ರಮಾಣವಾಗಿದೆ. ಮುಂದೆ ಉದಾಹರಿಸುವ ಮತ್ಸ್ಯಪುರಾಣದ ವಚನಗಳು ಪದ್ಮಪುರಾಣ ಮೊದಲಾದ ಇತರಪುರಾಣಗಳಲ್ಲಿಯೂ ಕಂಡುಬರುತ್ತವೆ.

ಪುರಾಣಮೇಕಮೇವಾಸೀತ್ ತದಾ ಕಲ್ಪಾಂತರೇಽನಘ ।
ತ್ರಿವರ್ಗಸಾಧನಂ ಪುಣ್ಯಂ ಶತಕೋಟಿಪ್ರವಿಸ್ತರಮ್ ॥

ನಿರ್ದಗ್ಧೇಷು ಚ ಲೋಕೇಷು ವಾಜಿರೂಪೇಣ ವೈ ಮಯಾ ।
ಅಂಗಾನಿ ಚತುರೋ ವೇದಾಃ ಪುರಾಣನ್ಯಾಯವಿಸ್ತರಮ್ ।
ಮೀಮಾಂಸಾ ಧರ್ಮಶಾಸ್ತ್ರಂ ಚ ಪ್ರತಿಗೃಹ್ಯ ಮಯಾ ಕೃತಮ್ ॥

ಪ್ರವೃತ್ತಿಃ ಸರ್ವಶಾಸ್ತ್ರಾಣಾಂ ಪುರಾಣಸ್ಯಾಭವತ್ತತಃ ।
ಕಾಲೇನಾಗ್ರಹಣಂ ದೃಷ್ಟ್ವಾ ಪುರಾಣಸ್ಯ ತತೋ ನೃಪ ॥

ವ್ಯಾಸರೂಪಮಹಂ ಕೃತ್ವಾ ಸಂಹರಾಮಿ ಯುಗೇ ಯುಗೇ ।
ಚತುರ್ಲಕ್ಷಪ್ರಮಾಣೇನ ದ್ವಾಪರೇ ದ್ವಾಪರೇ ಸದಾ ॥

ತಥಾಷ್ಟಾದಶಧಾ ಕೃತ್ವಾ ಭೂರ್ಲೋಕೇಽಸ್ಮಿನ್ ಪ್ರಕಾಶ್ಯತೇ ।
ಅದ್ಯಾಪಿ ದೇವಲೋಕೇಽಸ್ಮಿನ್ ಶತಕೋಟಿಪ್ರವಿಸ್ತರಮ್ ॥
ತದರ್ಥೋಽತ್ರ ಚತುರ್ಲಕ್ಷಂ ಸಂಕ್ಷೇಪೇಣ ಪ್ರಕೀರ್ತಿತಮ್ ॥ ಮತ್ಸ್ಯ.53.3-11.

ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ ।
ಭಾರತಾಖ್ಯಾನಮಖಿಲಂ ಚಕ್ರೇ ತದುಪಬೃಂಹಿತಮ್ ॥

ಲಕ್ಷೇಣೈಕೇನ ಯತ್ಪ್ರೋಕ್ತಂ ವೇದಾರ್ಥಪರಿಬೃಂಹಿತಮ್ । ಮತ್ಸ್ಯ. 53.69.

*'ಹಿಂದೆ ಕಲ್ಪಾಂತರಗಳಲ್ಲಿ ಧರ್ಮಾರ್ಥಕಾಮಗಳಿಗೆ ಸಾಧನವಾದ ಪುರಾಣ ಒಂದೇ ಇದ್ದಿತು. ಅದು ನೂರುಕೋಟಿ ಶ್ಲೋಕಾತ್ಮಕವಾದದ್ದು. ಹಿಂದೆ ಪ್ರಪಂಚವೆಲ್ಲವೂ ಪ್ರಳಯದಗ್ಧವಾಗಿ ಪ್ರನಷ್ಟವಾಗಿ ಹೋದ ಬಳಿಕ ನಾನು ಹಯಗ್ರೀವರೂಪವನ್ನು ಧರಿಸಿದೆ. ನಾಲ್ಕು ವೇದಗಳನ್ನು, ಆರು ವೇದಾಂಗಗಳನ್ನು, ಪುರಾಣವನ್ನು, ತರ್ಕಶಾಸ್ತ್ರವನ್ನು, ಮೀಮಾಂಸಾ ಹಾಗೂ ಧರ್ಮಶಾಸ್ತ್ರಗಳನ್ನು ವ್ಯಕ್ತಗೊಳಿಸಿ ವಿಭಾಗಿಸಿ ಇಟ್ಟೆ. ಅನಂತರ ಮತ್ಸ್ಯರೂಪದಿಂದ ಎಲ್ಲ ವೇದಪುರಾಣಗಳನ್ನು ಮನುವಿಗೆ ಉಪದೇಶಿಸಿದೆ. ಮುಂದೆ ಕಾಲಕ್ರಮದಿಂದ ಜನರಿಗೆ ಅದನ್ನೆಲ್ಲ ತಿಳಿದುಕೊಳ್ಳುವುದು ದುಸ್ತರವಾಯಿತು. ಆಗ ನಾನು ಜನರ ಮೇಲಿನ ಅನುಕಂಪೆಯಿಂದ ಶ್ರೀವೇದವ್ಯಾಸನಾಗಿ ಅವತರಿಸಿ ನೂರುಕೋಟಿ ಶ್ಲೋಕಾತ್ಮಕವಾದ ಪುರಾಣವಾಙ್ಮಯವನ್ನು ನಾಲ್ಕುಲಕ್ಷ ಶ್ಲೋಕದ ಗಾತ್ರಕ್ಕೆ ಹೊಂದಿಸಿದ್ದೇನೆ. ದೇವಲೋಕದಲ್ಲಿ ಮಾತ್ರ ಈ ಪುರಾಣವಾಙ್ಮಯದ ಪ್ರಮಾಣ ಒಂದುನೂರು ಕೋಟಿ. ಹೀಗೆ ವೇದವ್ಯಾಸದೇವರು ಪುರಾಣಗಳನ್ನು ಸಂಗ್ರಹಿಸಿ, ತದರ್ಥನಿರ್ಣಾಯಕವಾದ ಮಹಾಭಾರತವೆಂಬ ಹಿರಿದಾದ ಕೃತಿಯನ್ನು ರಚಿಸಿದರು. ಇದರಲ್ಲಿ ಒಂದುಲಕ್ಷ ಶ್ಲೋಕಗಳಿವೆ. ಈ ಮಹಾಭಾರತವು ವೇದಾರ್ಥಮಾಡಿಕೊಳ್ಳುವದಕ್ಕೆ ಸಹಕಾರಿಯಾಗಿದೆ.*

ಮೇಲೆ ಉದಾಹರಿಸಿದ ವಚನಗಳಲ್ಲಿ ಮತ್ಸ್ಯರೂಪಿಯಾದ ಭಗವಂತನು 'ವ್ಯಾಸರೂಪಮಹಂ ಕೃತ್ವಾ ಸಂಹರಾಮಿ ಯುಗೇ ಯುಗೇ' 'ನಾನೇ ವೇದವ್ಯಾಸನಾಗಿ ಅವತಾರಮಾಡಿ ನೂರುಕೋಟಿ ಶ್ಲೋಕಾತ್ಮಕವಾದ ಪುರಾಣವನ್ನು ಹದಿನೆಂಟುಪುರಾಣಗಳಾಗಿ ಸಂಗ್ರಹಮಾಡುತ್ತೇನೆ' ಎಂದು ಹೇಳುತ್ತಾನೆ. ಆದ್ದರಿಂದ ಮತ್ಸ್ಯ, ಕೂರ್ಮ, ವರಾಹ ಮೊದಲಾದ ಅವತಾರಗಳಿಗೂ ವೇದವ್ಯಾಸಾವತಾರಕ್ಕೂ ಯಾವುದೇ ವಿಶೇಷವಿಲ್ಲ ಎಂದು ತಿಳಿಯಬಹುದು.

೫. ಸ್ಕಂದಪುರಾಣದಲ್ಲಿಯೂ ಮತ್ಸ್ಯಪುರಾಣದಲ್ಲಿ ಬಂದ ಶ್ಲೋಕಕ್ಕೆ ಸಮಾನವಾದ ಶ್ಲೋಕಗಳೇ ಇವೆ. ಇಲ್ಲಿ ಒಂದು ವಿಶೇಷ ಇದೆ. ಮತ್ಸ್ಯಪುರಾಣ ಮತ್ಸ್ಯರೂಪಿಯಾದ ಭಗವಂತನೇ ಉಪದೇಶ ಮಾಡಿದ್ದು. ಹಾಗಾಗಿ 'ನಾನೇ ಹಯಗ್ರೀವನಾಗಿ' 'ನಾನೇ ವೇದವ್ಯಾಸನಾಗಿ' ಎಂದು ಭಗವಂತ ಹೇಳಿಕೊಂಡಿದ್ದಾನೆ. ಸ್ಕಂದಪುರಾಣ ಸ್ಕಂದನು ಉಪದೇಶಿಸಿದ್ದು. ಸ್ಕಂದ ಸ್ಪಷ್ಟವಾಗಿ ವ್ಯಾಸರು ಸಾಕ್ಷಾತ್ ನಾರಾಯಣ ಎಂದು ಹೇಳಿದ್ದಾನೆ.

ಏಕಮೇವ ಪುರಾ ಹ್ಯಾಸೀತ್ ಬ್ರಹ್ಮಾಂಡಂ ಶತಕೋಟಿಧಾ ।
ತತೋಽಷ್ಟಾದಶಧಾ ಕೃತ್ವಾ ವೇದವ್ಯಾಸೋ ಯುಗೇ ಯುಗೇ ॥
ಪ್ರಖ್ಯಾಪಯತಿ ಲೋಕೇಽಸ್ಮಿನ್ ಸಾಕ್ಷಾನ್ನಾರಾಯಣಾಂಶಜಃ ॥ ಸ್ಕಂದ. ಪ್ರಭಾಸ 2.8-9.

## ೬. ವ್ಯಾಸರು ನಾರಾಯಣನ ಅವತಾರ ಎನ್ನುವದಕ್ಕೆ ಪಂಚರಾತ್ರ ಪ್ರಮಾಣ

ಮುಂದೆ ಉದಾಹರಿಸುವ ವಚನಗಳು ಪಂಚರಾತ್ರದಲ್ಲಿಯದು. ಶ್ರೀಮದಾಚಾರ್ಯರು ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ೨ನೆಯ ಅಧ್ಯಾಯದಲ್ಲಿ ಈ ಶ್ಲೋಕಗಳನ್ನು ಉದಾಹರಿಸಿದ್ದಾರೆ. ಈ ವಚನಗಳು ಯಾವುದು ಭಗವಂತನ ಸಾಕ್ಷಾತ್ ಅವತಾರ. ಯಾವುದು ಆವೇಶಾವತಾರ ಎಂಬುವದನ್ನು ನಿರವಕಾಶವಾಗಿ, ಅತ್ಯಂತ ನಿಖರವಾಗಿ ಹೇಳುತ್ತವೆ. ಈ ದೃಷ್ಟಿಯಿಂದ ವೈಷ್ಣವತಂತ್ರದ ಈ ಶ್ಲೋಕಗಳು ಅತ್ಯಂತ ಮಹತ್ತ್ವದ್ದಾಗಿವೆ.

### ಈ ವಚನಗಳು ಪಂಚರಾತ್ರದ್ದೇ ಎನ್ನುವದಕ್ಕೆ ಸಮರ್ಥನೆ

ಶ್ರೀವಲ್ಲಭಾಚಾರ್ಯರು ಶ್ರೀಮದ್ಭಾಗವತಕ್ಕೆ ಸುಬೋಧಿನೀ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಸುಬೋಧಿನಿಯಲ್ಲಿ ಈ ವಚನಗಳನ್ನು ಪಂಚರಾತ್ರದಲ್ಲಿಯ ವೈಷ್ಣವತಂತ್ರದ್ದೆಂದು ಉದಾಹರಿಸುತ್ತಾರೆ. ವಲ್ಲಭಾಚಾರ್ಯರ ಕಾಲ ಸುಮಾರು ೧೪೭೮-೧೫೩೦ ವರೆಗೆ. ಆ ಕಾಲದವರೆಗೂ ವೈಷ್ಣವತಂತ್ರದಲ್ಲಿ ಈ ವಚನಗಳು ಉಪಲಬ್ಧವಾಗಿರಲೇಬೇಕು. ಕಾರಣ, ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ಉದಾಹರಿಸಿದ್ದು ೧೦ ಶ್ಲೋಕಗಳನ್ನು ಮಾತ್ರ. ವಲ್ಲಭಾಚಾರ್ಯರು ೧೦ ಶ್ಲೋಕಗಳ ಜೊತೆಗೆ ಮೊದಲಿನ ಅರ್ಧಶ್ಲೋಕವನ್ನು, ಕೊನೆಯಲ್ಲಿ ಹೆಚ್ಚಿನ ಅರ್ಧ ಶ್ಲೋಕವನ್ನು ಉದಾಹರಿಸುತ್ತಾರೆ. ಶ್ಲೋಕಗಳ ಪಾಠಗಳಲ್ಲಿಯೂ ಅನೇಕ ಬದಲಾವಣೆಗಳಿವೆ. ಹೀಗಿದ್ದರೂ ಶ್ರೀಮದಾಚಾರ್ಯರು ಹೇಳುವ ಪ್ರಮೇಯಕ್ಕೆ ಕಿಂಚಿತ್ತೂ ವಿರೋಧಿಯಲ್ಲ. ಆ ವಚನಗಳನ್ನು ನೋಡೋಣ.

ಕ್ರಿಯಾಶಕ್ತ್ಯಾ ಜ್ಞಾನಶಕ್ತ್ಯಾ ಚಾವತಾರಂ ಕರೋತ್ಯಜಃ ।
ವಾರಾಹಾದಿಸ್ವರೂಪೇಷು ಬಲಕಾರ್ಯಂ ಜನಾರ್ದನಃ ॥

ದತ್ತವ್ಯಾಸಾದಿರೂಪೇಷು ಜ್ಞಾನಕಾರ್ಯಂ ತಥಾ ಪ್ರಭುಃ ।
ಮತ್ಸ್ಯಕೂರ್ಮವರಾಹಾಶ್ಚ ಸಿಂಹವಾಮನಭಾರ್ಗವಾಃ ॥

ರಾಘವಃ ಕೃಷ್ಣಬುದ್ಧೌ ಚ ಕೃಷ್ಣದ್ವೈಪಾಯನಸ್ತಥಾ ।
ಕಪಿಲೋ ದತ್ತ ಋಷಭಃ ಶಿಂಶುಮಾರೋ ರುಚೇಃ ಸುತಃ ॥

ನಾರಾಯಣೋ ಹರಿಃ ಕೃಷ್ಣಸ್ತಾಪಸೋ ಮನುರೇವ ಚ ।
ಮಹಿದಾಸಸ್ತಥಾ ಹಂಸಃ ಸ್ತ್ರೀರೂಪೋ ಹಯಶೀರ್ಷವಾನ್ ॥

ತಥೈವ ವಡವಾವಕ್ತ್ರಃ ಕಲ್ಕೀ ಧನ್ವಂತರಿಃ ಪ್ರಭುಃ ।
ಇತ್ಯಾದ್ಯಾ ಕೇವಲೋ ವಿಷ್ಣುಃ ನ ವಿಶೇಷೋಽತ್ರ ಕಶ್ಚನ ॥

ಶ್ರೀಬ್ರಹ್ಮರುದ್ರಶೇಷಾಶ್ಚ ಕವೀಂದ್ರಃ ಕಾಮ ಏವ ಚ ।
ಕಾಮಪುತ್ರೋಽನಿರುದ್ಧಶ್ಚ ಸೂರ್ಯಶ್ಚಂದ್ರೋ ಬೃಹಸ್ಪತಿಃ ।
ಧರ್ಮ ಏಷಾಂ ತಥಾ ಭಾರ್ಯಾ ದಕ್ಷಾದ್ಯಾ ಮನವಸ್ತಥಾ ॥

ಮನುಪುತ್ರಾಶ್ಚ ಋಷಯೋ ನಾರದಃ ಪರ್ವತಸ್ತಥಾ ।
ಕಶ್ಯಪಃ ಸನಕಾದ್ಯಾಶ್ಚ ಬ್ರಹ್ಮಾದ್ಯಾಶ್ಚೈವ ದೇವತಾಃ ॥

ಭರತಃ ಕಾರ್ತವೀರ್ಯಾಶ್ಚ ವೈನ್ಯಾದ್ಯಾಶ್ಚಕ್ರವರ್ತಿನಃ ।
ಗಯಶ್ಚ ಲಕ್ಷ್ಮಣಾದ್ಯಾಶ್ಚ ತ್ರಯೋ ರೋಹಿಣಿನಂದನಃ ॥

ಪ್ರದ್ಯುಮ್ನೋ ರೌಕ್ಮಿಣೇಯಶ್ಚ ತತ್ಪುತ್ರಶ್ಚಾನಿರುದ್ಧಕಃ ।
ನರಃ ಫಲ್ಗುನ ಇತ್ಯಾದ್ಯಾ ವಿಶೇಷಾವೇಶಿನೋ ಹರೇಃ ॥

ಇಹೋಕ್ತಿರವಿಶೇಷೇಣ ಸಾಮಾನ್ಯತ ಇತಿ ಸ್ಫುಟಮ್ । ಸುಬೋಧಿನೀ.1.3.5.

ಮೇಲಿನ ವಚನಗಳ ಅರ್ಥ. ವಿಷ್ಣುವಿನ ಎಲ್ಲ ಅವತಾರಗಳೂ ಪರಿಪೂರ್ಣವಾಗಿವೆ. ಅವನು ಎಲ್ಲ ರೂಪಗಳಿಂದಲೂ ಎಲ್ಲ ಕಾರ್ಯಗಳನ್ನು ಮಾಡಲು ಸಮರ್ಥನು. ಆದರೂ ತನ್ನ ಇಚ್ಛೆಯಿಂದ ಕೆಲವು ರೂಪಗಳಿಂದ ಒಂದು ರೀತಿಯ ಕಾರ್ಯಗಳನ್ನು ಮಾಡುತ್ತಾನೆ. ಇನ್ನು ಕೆಲವು ರೂಪಗಳಿಂದ ಬೇರೆ ರೀತಿಯ ಕಾರ್ಯಗಳನ್ನು ಮಾಡುತ್ತಾನೆ.

ಶ್ರೀಹರಿಯ ರಾಮ, ಕೃಷ್ಣ ಮೊದಲಾದ ರೂಪಗಳು (ಕ್ರಿಯಾಶಕ್ತಿ) ಬಲಕಾರ್ಯವನ್ನು ಮಾಡುತ್ತವೆ. ಬಲಕಾರ್ಯ ಎಂದರೆ ದೈತ್ಯಹನನ, ಭೂಭಾರಹರಣ ಮೊದಲಾದ ಬಲದಿಂದ ಮಾಡುವ ಕಾರ್ಯಗಳು.

ವೇದವ್ಯಾಸ, ಹಯಗ್ರೀವ, ದತ್ತಾತ್ರೇಯ, ಕಪಿಲ ಮೊದಲಾದ ಅವತಾರಗಳು (ಜ್ಞಾನಶಕ್ತಿ) ಜ್ಞಾನಕಾರ್ಯವನ್ನು ಮಾಡುತ್ತವೆ. ಜ್ಞಾನಕಾರ್ಯ ಎಂದರೆ ಕಾಲಬಲದಿಂದ ಇನ್ನಿತರ ಕಾರಣಗಳಿಂದ ತಿರೋಹಿತವಾದ ಶಾಸ್ತ್ರಗಳನ್ನು ರಚಿಸಿ, ಸಜ್ಜನರಿಗೆ ಉಪದೇಶ ಮಾಡುವುದು ಇತ್ಯಾದಿಗಳು.

**ಶ್ರೀಹರಿಯ ಸಾಕ್ಷಾದವತಾರಗಳು**

ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ದಾಶರಥಿರಾಮ, ಯಾದವಕೃಷ್ಣ, ಬುದ್ಧ, ವ್ಯಾಸ(ವಾಸಿಷ್ಠಕೃಷ್ಣ), ಕಪಿಲ, ದತ್ತಾತ್ರೇಯ, ವೃಷಭ, ಶಿಂಶುಮಾರ, ಯಜ್ಞ, ನಾರಾಯಣ, ಹರಿ, ಕೃಷ್ಣ(ಧಾರ್ಮಕೃಷ್ಣ) ತಾಪಸಮನು, ಮಹಿದಾಸ, ಹಂಸ, ನಾರಾಯಣೀ, ಹಯಗ್ರೀವ, ವಡವಾನಲ, ಕಲ್ಕೀ, ಧನ್ವಂತರೀ ಇವೇ ಮೊದಲಾದವುಗಳು ವಿಷ್ಣುವಿನ ಸಾಕ್ಷಾತ್ ಅವತಾರಗಳು. ಈ ರೂಪಗಳಲ್ಲಿ ಸ್ವಲ್ಪವೂ ಭೇದ ಇಲ್ಲ. ಬಲ, ಜ್ಞಾನ, ಸುಖ ಮುಂತಾದ ಗುಣಗಳಿಂದಲೂ ಎಲ್ಲಿಯೂ ತಾರತಮ್ಯವಿಲ್ಲ.

**ಶ್ರೀಹರಿಯ ಆವೇಶಾವತಾರಗಳು**

ಮಹಾಲಕ್ಷ್ಮೀ, ಬ್ರಹ್ಮವಾಯುಗಳು, ಗರುಡಶೇಷರುದ್ರರು, ಇಂದ್ರಕಾಮರು, ಕಾಮಪುತ್ರನಾದ ಅನಿರುದ್ಧ, ಸೂರ್ಯ, ಚಂದ್ರ, ಬೃಹಸ್ಪತಿ, ಯಮ, ಇವರೆಲ್ಲರ ಪತ್ನಿಯರು, ದಕ್ಷ ಮೊದಲಾದವರು, ಸ್ವಾಯಂಭುವ ಮೊದಲಾದ ಮನುಗಳು, ಮನುಪುತ್ರರು, ಋಷಿಗಳು, ನಾರದ, ಪರ್ವತ, ಕಶ್ಯಪ, ಸನಕಾದಿಗಳು, ಅಗ್ನಿ ಮೊದಲಾದ ದೇವತೆಗಳು, ಭರತ, ಕಾರ್ತವೀರ್ಯಾರ್ಜುನ, ಪೃಥು ಮೊದಲಾದ

ಚಕ್ರವರ್ತಿಗಳು, ಗಯ, ಲಕ್ಷ್ಮಣ, ಭರತ, ಶತ್ರುಘ್ನ, ಬಲರಾಮ, ಪ್ರದ್ಯುಮ್ನ, ಅವನ ಮಗ ಅನಿರುದ್ಧ, ನರ, ಅರ್ಜುನ ಇವರೆಲ್ಲ ಶ್ರೀಹರಿಯ ವಿಶೇಷಾವೇಶವನ್ನು ಹೊಂದಿದವರು. ವಾಲಿ, ಸಾಂಬ ಮೊದಲಾದವರೆಲ್ಲ ಶ್ರೀಹರಿಯ ಅಲ್ಪಾವೇಶವನ್ನು ಪಡೆದವರು.

ಈ ರೀತಿ 'ರಾಘವಃ ಕೃಷ್ಣಬುದ್ಧೌ ಚ ಕೃಷ್ಣದ್ವೈಪಾಯನಸ್ತಥಾ' ಎಂದು ಅತ್ಯಂತ ಸ್ಫುಟವಾಗಿ ವೈಷ್ಣವತಂತ್ರ ಸಾರುತ್ತಿರುವದರಿಂದಲೂ ಶ್ರೀವೇದವ್ಯಾಸರು ನಾರಾಯಣನ ಸಾಕ್ಷಾದವತಾರ ಎಂದು ನಮಗೆ ಸಿದ್ಧವಾಗುತ್ತದೆ.

ಹೀಗೆ ಶ್ರೀಮನ್ಮಹಾಭಾರತ, ಪದ್ಮಪುರಾಣ, ವಿಷ್ಣುಪುರಾಣ, ಮತ್ಸ್ಯಪುರಾಣ, ಆಚಾರ್ಯರು ಹಾಗು ವಲ್ಲಭಾಚಾರ್ಯರು ಉದಾಹರಿಸುವ ವೈಷ್ಣವತಂತ್ರ ಈ ಎಲ್ಲ ಆಕರಗಳಿಂದ ಶ್ರೀವೇದವ್ಯಾಸದೇವರು ಸಾಕ್ಷಾತ್ ನಾರಾಯಣಾವತಾರ ಎಂದು ನಿರ್ಣಯವಾಗುತ್ತದೆ.

**ಶಂಕರಾಚಾರ್ಯರ ಅಭಿಪ್ರಾಯ ಪ್ರಮಾಣವಿರುದ್ಧ**

'ಕೃಷ್ಣದ್ವೈಪಾಯನರು ಒಬ್ಬ ಋಷಿ' ಎಂಬ ಶಂಕರಾಚಾರ್ಯರ ಅಭಿಪ್ರಾಯವನ್ನು ಅವರ ಭಾಷ್ಯಕ್ಕೆ ಟೀಕೆಯನ್ನು ಬರೆದ ವಾಚಸ್ಪತಿಮಿಶ್ರರೇ ತಳ್ಳಿಹಾಕಿದ್ದಾರೆ. ಕಲ್ಪತರುಕಾರರು, ಭಾಮತೀಕಾರರ ಅಭಿಪ್ರಾಯವನ್ನು ಸಪ್ರಮಾಣವಾಗಿ ಸಮರ್ಥಿಸಿ ಶಂಕರರ ಆಶಯವನ್ನು ನಿರಾಕರಿಸುತ್ತಾರೆ. ಭಾಮತೀಕಾರರು, ಕಲ್ಪತರುಕಾರರು ಮಾತ್ರವಲ್ಲ ಅದ್ವೈತಮತಾನುಸಾರಿಯಾದ ಶ್ರೀಮದ್ಭಾಗವತದ ಶ್ರೀಧರೀಟೀಕಾ, ವಂಶೀಧರೀಟಿಪ್ಪಣೀ, ವಿಷ್ಣುಪುರಾಣದ ಶ್ರೀಧರಸ್ವಾಮಿಟೀಕೆ ಹೀಗೆ ಶಂಕರರ ಅಭಿಪ್ರಾಯವನ್ನು ಮನ್ನಿಸದ ಶಾಂಕರಾನುಯಾಯಿಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಹೀಗಾಗಿ ಶಂಕಾರಾಚಾರ್ಯರ ಅಭಿಪ್ರಾಯವನ್ನು ವಿಮರ್ಶಿಸುವದಕ್ಕೆ ಪ್ರತ್ಯೇಕ ಪ್ರಯತ್ನದ ಆವಶ್ಯಕತೆಯೇ ಇಲ್ಲ. ಆದರೂ ಪ್ರಬಲವಾದ ಭಾರತಪುರಾಣಪಂಚರಾತ್ರವಚನಗಳ ವಿರೋಧವಿರುವುದನ್ನು ತಿಳಿದು ಶುದ್ಧವಾದ ಜ್ಞಾನಪಡೆಯುವ ಉದ್ದೇಶದಿಂದ ಪ್ರಮಾಣವಚನಗಳನ್ನು ಪರಿಶೀಲಿಸಿ ವಿಮರ್ಶೆ ಮಾಡಿದ್ದೇವೆ.

**ವಿಶಿಷ್ಟಾದ್ವೈತಮತದ ಅಭಿಪ್ರಾಯ ಅನಾದರಣೀಯ**

ಶಂಕರಾಚಾರ್ಯರು, ವ್ಯಾಸರು ನಾರಾಯಣಾವತಾರ ಎಂದು ಒಪ್ಪದಿದ್ದರೂ ಬ್ರಹ್ಮಜ್ಞಾನಿಯಾದ ಸರ್ವಜ್ಞನಾದ ಒಬ್ಬ ಋಷಿ ಎಂದು ಹೇಳುತ್ತಾರೆ. ಆದರೆ ರಾಮಾನುಜೀಯರು 'ವ್ಯಾಸರು ಸಾಮಾನ್ಯ ಜೀವಾತ್ಮ' ಎಂದು ಹೇಳುತ್ತಾರೆ. ಇದು ಅತ್ಯಂತ ಹೇಯ.

ಅಜ್ಞಾನದಿಂದ ತೊಳಲುವ ಜೀವರಾಶಿಗಳಿಗೆ ಪ್ರಜ್ಞಾಚಕ್ಷುಸ್ಸನ್ನು ನೀಡಿ ಸಲುಹಿದ, ಮಹಾ ಮಹಾದೇವತೆಗಳಿಂದ ಅಸಾಧ್ಯವಾದ ಅನಂತವೇದಗಳ ವಿಭಾಗವನ್ನು ಮಾಡಿದ, ಭಾರತವೆಂಬ ಬೆಳಕಿನ ನಿಧಿಯನ್ನು ಪ್ರಪಂಚಕ್ಕೆ ನೀಡಿದ ವೇದವ್ಯಾಸದೇವರನ್ನು, ಯಾವುದೋ ಒಂದು ಪ್ರಮಾಣವಚನಕ್ಕೆ ಜೋತುಬಿದ್ದು, ಸಾಮಾನ್ಯಮಾನವನನ್ನಾಗಿ ಕಾಣುವುದು ಅತ್ಯಂತ ಅಯುಕ್ತ. ಅತ್ಯಂತ ನಿಂದನೀಯ.

ಶ್ರೀಮನ್ಮಹಾಭಾರತ, ಭಾಗವತ ಇನ್ನಿತರ ಪುರಾಣಗಳು ಇಷ್ಟು ಸ್ಫುಟವಾಗಿ ವ್ಯಾಸರಿಗೆ ಸಾಕ್ಷಾತ್ ನಾರಾಯಣತ್ವವನ್ನು ಸಮರ್ಥಿಸುತ್ತಿವೆ. ನಿರವಕಾಶವಾದ, ಭಾರತಪಂಚರಾತ್ರಾದಿ ಅನೇಕಪ್ರಮಾಣಗಳಿಗೆ

ಅನುಗುಣವಾಗಿ ವಿಷ್ವಕ್ಸೇನಸಂಹಿತೆಯ ವಚನಗಳಿಗೆ ಅವಿರುದ್ಧವಾದ ಬೇರೆ ಅರ್ಥವನ್ನು ಹೇಳಬೇಕು. ಹೊರತು ವಿಷ್ವಕ್ಸೇನಸಂಹಿತೆಯ ಅಭಿಪ್ರಾಯಮಾತ್ರವನ್ನು ಮನ್ನಿಸಿ ಇಷ್ಟೆಲ್ಲ ಭಾರತ, ಭಾಗವತ, ಪದ್ಮಪುರಾಣ ಮೊದಲಾದ ಬಹುಪ್ರಮಾಣಗಳ ವಿರೋಧಕಟ್ಟಿಕೊಳ್ಳುವುದು ಅನುಚಿತ.

ಅಲ್ಲದೆ, 'ಮತ್ಸ್ಯ, ಕೂರ್ಮ ಮೊದಲಾದವುಗಳು ಸಾಕ್ಷಾದವತಾರ', 'ವ್ಯಾಸರು ಆವೇಶಾವತಾರ' ಎಂದು ಅವರ ಅಭಿಪ್ರಾಯ. ಇದೂ ಅಯುಕ್ತ. ಮತ್ಸ್ಯಪುರಾಣದಲ್ಲಿ ಮತ್ಸ್ಯರೂಪಿಯಾದ ಭಗವಂತನು 'ವಾಜಿರೂಪೇಣ ವೈ ಮಯಾ' 'ನಾನೇ ಹಯಗ್ರೀವನಾಗಿ ಅವತರಿಸಿ ವೇದಗಳ ಉದ್ಧಾರಮಾಡುತ್ತೇನೆ' 'ವ್ಯಾಸರೂಪಮಹಂ ಕೃತ್ವಾ ಸಂಹರಾಮಿ ಯುಗೇ ಯಗೇ' 'ನಾನೇ ವ್ಯಾಸನಾಗಿ ಅವತರಿಸಿ ಪುರಾಣಸಂಗ್ರಹಮಾಡುತ್ತೇನೆ' ಎಂದು ಮತ್ಸ್ಯರೂಪಿಯಾದ ಭಗವಂತನು ತನಗೂ ಹಯಗ್ರೀವಾವತಾರಕ್ಕೂ ವ್ಯಾಸಾವತಾರಕ್ಕೂ ಸ್ಪಷ್ಟವಾಗಿ ಅಭೇದವನ್ನು ಹೇಳಿಕೊಂಡಿದ್ದಾನೆ. ಈ ಕಾರಣದಿಂದಲೂ 'ಮತ್ಸ್ಯಾವತಾರ ಪೂರ್ಣಾವತಾರ, ವ್ಯಾಸಾವತಾರ ಪೂರ್ಣಾವತಾರವಲ್ಲ, ಕೇವಲ ಆವೇಶಾವತಾರ' ಎಂದು ಹೇಳುವುದು ಅತ್ಯಂತ ಅಯುಕ್ತವಾಗಿದೆ.

ಈ ರೀತಿ ಬಹುಪ್ರಮಾಣವಿರುದ್ಧವಾದ ರಾಮಾನುಜರ ಅಭಿಪ್ರಾಯ ಅಪ್ರಾಮಾಣಿಕ, ಅನಾದರಣೀಯ.

**ಆರಾಮಮಸ್ಯ ಪಶ್ಯಂತಿ...**

ಅನೇಕ ಮತಾಚಾರ್ಯರು, ಧರ್ಮ, ಅರ್ಥ, ಕಾಮ, ಮೋಕ್ಷಗಳ ಜ್ಞಾನಕೋಶದಂತಿರುವ ವ್ಯಾಸರ ಅಮೋಘವಾದ ಕೃತಿಗಳ ಹಿಂದಿರುವ ತಾತ್ವಿಕಚಿಂತನೆಗಳನ್ನು, ಆಲೋಚನೆಗಳನ್ನು, ಭಾವಗಳನ್ನು ತಿಳಿಯದೇ ವ್ಯಾಖ್ಯಾನ ಮಾಡುವದರ ಜೊತೆಗೆ ಅವರ ಮೂಲರೂಪದ ಮಹಿಮೆಯನ್ನೂ ಕಂಡುಹಿಡಿಯಲು ಅಸಮರ್ಥರಾದರು.

ಶ್ರೀಮದಾಚಾರ್ಯರು ಮಾತ್ರ ವೇದವ್ಯಾಸದೇವರ ಮೂಲಸ್ವರೂಪವನ್ನು, ಮೇರುಭಾರದ ಮಹಿಮೆಯನ್ನು, ಅತ್ಯಂತ ಸುಂದರವಾಗಿ ಪರಿಚಯಮಾಡಿಸುತ್ತಾರೆ. ಇಷ್ಟುಮಾತ್ರವಲ್ಲದೆ ಅವರ ಎಲ್ಲ ಕೃತಿಗಳ ನಿಜವಾದ ಉದ್ದೇಶ ಹಾಗು ಆಕೂತಗಳನ್ನು ಅರಿತು ಸಮಂಜಸವಾಗಿ ಯುಕ್ತಿಪುರಸ್ಸರವಾಗಿ ಮನಮುಟ್ಟುವಂತೆ ನಿರೂಪಿಸುತ್ತಾರೆ. ತಾವು ವ್ಯಾಸರ ಕೃತಿಗಳಲ್ಲಿ ಕಂಡ ಸೊಬಗನ್ನು, ಉಂಡ ಸವಿಯನ್ನು ಪುಣ್ಯಾತ್ಮರಿಗೆ ಉಣಬಡಿಸುತ್ತಾರೆ. ಒಂದು ಕೃತಿಯ ನಿಜವಾದ ಭಾವವನ್ನು ತಿಳಿಯಬೇಕಾದರೆ ಕೃತಿಯ ಜೊತೆಗೆ ಕೃತಿಕಾರರ ಮೂಲರೂಪವನ್ನು, ವ್ಯಕ್ತಿತ್ವವನ್ನು ತಿಳಿಯಬೇಕಾದದ್ದು ಅತ್ಯಾವಶ್ಯಕ. ಅದಕ್ಕಾಗಿಯೇ ಶ್ರೀಮದಾಚಾರ್ಯರು ವೇದವ್ಯಾಸರ ದಿವ್ಯ, ಭವ್ಯ ರೂಪವನ್ನು, ಅವತಾರಕಾರ್ಯವನ್ನು ಜಗತ್ತಿಗೆ ತಿಳಿಸುವದಕ್ಕಾಗಿ ಒಂದು ಅಧ್ಯಾಯವನ್ನು ಮೀಸಲಾಗಿ ಇಟ್ಟಿದ್ದಾರೆ.

ಶ್ರೀಮದಾಚಾರ್ಯರು ಬರೆದ ಈ ಮೇರುಕೃತಿಗೆ ಅನೇಕವ್ಯಾಖ್ಯಾನಗಳು ಇವೆ. ಎಲ್ಲ ವ್ಯಾಖ್ಯಾನಗಳೂ ಮಧ್ವಮುನಿಗಳ ವಚನಗಳ ಭಾವವನ್ನು ಬೆಳಗಿಸುವುದಕ್ಕೆ ಹೊರಟಿವೆ. ಜೊತೆಗೆ ಅನೇಕಪ್ರಸಂಗಗಳಲ್ಲಿ ನೂರಾರು ಹೊಸ ವಿಷಯಗಳನ್ನು ತಿಳಿಸಿ ಪರಮಾನುಗ್ರಹ ಮಾಡುತ್ತವೆ. ಮಹಾಜ್ಞಾನಿಗಳಿಂದ ರಚಿತವಾದ, ಸಾಂಪ್ರದಾಯಿಕಜ್ಞಾನದೀಪವನ್ನು ಹೊತ್ತು ಹೊರಟ ವ್ಯಾಖ್ಯಾನಗಳಲ್ಲಿಯ ಕೆಲವು ವಿಷಯಗಳನ್ನು ತಿಳಿಯೋಣ.

### ವೇದೋದ್ಧಾರ, ಬ್ರಹ್ಮಸೂತ್ರಾದಿಶಾಸ್ತ್ರನಿರ್ಮಾಣ

ಸಜ್ಜನರ ಮನಸ್ಸಿನಲ್ಲಿ ಅಜ್ಞಾನ, ಮಿಥ್ಯಾಜ್ಞಾನ, ಸಂಶಯಗಳು ತುಂಬಿ ತುಳುಕುತ್ತಿವೆ. ಅವುಗಳನ್ನು ಕಳೆಯವುದಕ್ಕೆ ವೇದವ್ಯಾಸಾವತಾರ. ಭಗವಂತ ಅನಂತ ವೇದಗಳನ್ನು ಉದ್ಧರಿಸಿ, ವೇದಗಳನ್ನು ವಿಭಾಗಿಸಿ, ಬ್ರಹ್ಮಸೂತ್ರ-ಭಾರತ ಪುರಾಣಗಳನ್ನು ರಚಿಸಿದ ಎಂದು ಕೇಳುತ್ತೇವೆ. ಇವುಗಳಲ್ಲಿ ಯಾವುದು ಮೊದಲು ರಚಿತವಾಗಿದೆ. ಯಾವುದು ಆಮೇಲೆ ರಚಿತವಾಗಿದೆ ಎಂಬ ವಿಷಯದಲ್ಲಿ ವ್ಯಾಖ್ಯಾನಕಾರರು ತಮ್ಮ ಅಭಿಪ್ರಾಯಗಳನ್ನು ಮುಂದಿಡುತ್ತಾರೆ. ಅವುಗಳನ್ನು ಪ್ರಮಾಣಪೂರ್ವಕ ವಿಮರ್ಶಿಸಿ ತಿಳಿಯೋಣ. ಪ್ರಮಾಣಗಳಿಗನುಗುಣವಾಗಿಯೇ ಈ ಕ್ರಮವನ್ನು ತಿಳಿಯಬೇಕು ಎಂದು ಟೀಕಾಕೃತ್ಪಾದರು ಶ್ರೀಮನ್ನ್ಯಾಯಸುಧೆಯಲ್ಲಿ (೧೦೧೬ಜಿಜ್ಞಾ.) ಹೇಳುತ್ತಾರೆ. 'ಯೇ ತು ದೇವಮೀಮಾಂಸಾಶಾಸ್ತ್ರಸ್ವರೂಪೇ ತದನಂತರಮೇತತ್ಸೂತ್ರಪ್ರಣಯನೇ ವಿಪ್ರತಿಪದ್ಯಂತೇ ತೇಷಾಂ ಪುರಾಣಾದಿಪ್ರಸಿದ್ಧಿವಿರೋಧಂ ಹಿ ಶಬ್ದೇನ ದರ್ಶಯತಿ' ಎಂದು.

### ವೇದವಿಭಾಗ, ಮಹಾಭಾರತಾದಿಗಳ ರಚನೆಯಲ್ಲಿ ಕ್ರಮ

### ತಾತ್ಪರ್ಯನಿರ್ಣಯದಲ್ಲಿ ಹೇಳಿದ ಕ್ರಮ

ದ್ವೈಪಾಯನಃ ಸೋಽಥ ಜಗಾಮ ಮೇರುಂ ಚತುರ್ಮುಖಾದ್ಯೈರನುಗಮ್ಯಮಾನಃ ।
ಉದ್ಧೃತ್ಯ ವೇದಾನಖಿಲಾನ್ ಸುರೇಭ್ಯೋ ದದೌ ಮುನಿಭ್ಯಶ್ಚ ಯಥಾದಿಸೃಷ್ಟೌ ॥57॥

ಸರ್ವಾಣಿ ಶಾಸ್ತ್ರಾಣಿ ತಥೈವ ಕೃತ್ವಾ ವಿನಿರ್ಣಯಂ ಬ್ರಹ್ಮಸೂತ್ರಂ ಚಕಾರ ।
ತಚ್ಛುಶ್ರುವುಃ ಬ್ರಹ್ಮಗಿರೀಶಮುಖ್ಯಾಃ ಸುರಾ ಮುನೀನಾಂ ಪ್ರವರಾಶ್ಚ ತಸ್ಮಾತ್ ॥58॥

ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಂ ಚಕ್ರೇ ಮಹಾಭಾರತನಾಮಧೇಯಮ್ ।
ವೇದೋತ್ತಮಂ ತಚ್ಚ ವಿಧಾತೃಶಂಕರಪ್ರಧಾನಕೈಸ್ತನ್ಮುಖತಃ ಸುರೈಃ ಶ್ರುತಮ್ ॥59॥

ಈ ರೀತಿ ೫೭, ೫೮, ೫೯ನೆಯ ಶ್ಲೋಕಗಳಲ್ಲಿ ಕ್ರಮವಾಗಿ ೧. ವೇದೋದ್ಧಾರ, ೨. ಸರ್ವಶಾಸ್ತ್ರಗಳ ರಚನೆ, ೩. ಬ್ರಹ್ಮಸೂತ್ರಗಳ ರಚನೆಯನ್ನು ಹೇಳುತ್ತಾ ಮಹಾಭಾರತ ರಚಿಸಿದ್ದನ್ನು ಹೇಳಿ,

೬೨ನೆಯ ಶ್ಲೋಕದಲ್ಲಿ-

ತತೋ ನೃಣಾಂ ಕಾಲಬಲಾತ್ ಸುಮಂದಮಾಯುರ್ಮತಿಂ ಕರ್ಮ ಚ ವೀಕ್ಷ್ಯ ಕೃಷ್ಣಃ ।
ವಿವ್ಯಾಸ ವೇದಾನ್ ಸ ವಿಭುಶ್ಚತುರ್ಧಾ ಚಕ್ರೇ ತಥಾ ಭಾಗವತಂ ಪುರಾಣಮ್ ॥

ವೇದವಿಭಾಗವನ್ನು ಹೇಳುತ್ತಾ, ಭಾಗವತಪುರಾಣ ರಚಿಸಿದ್ದನ್ನು ಹೇಳುತ್ತಾರೆ.

ಬಳಿಕ, ೮೨, ೮೩ನೆಯ ಶ್ಲೋಕಗಳಲ್ಲಿ-

ದೇವಮೀಮಾಂಸಿಕಾದ್ಯಂತಂ ಕೃತ್ವಾ ಪೈಲಮಥಾದಿಶತ್ ।
ಶೇಷಂ ಚ ಮಧ್ಯಕರಣೇ ಪುರಾಣಾನ್ಯಥ ಚಾಕರೋತ್ ॥

ಶೈವಾನ್ ಪಾಶುಪತಾಚ್ಚಕ್ರೇ ಸಂಶಯಾರ್ಥಂ ಸುರದ್ವಿಷಾಮ್ ।
ವೈಷ್ಣವಾನ್ ಪಂಚರಾತ್ರಾಚ್ಚ ಯಥಾರ್ಥಜ್ಞಾನಸಿದ್ಧಯೇ ।
ಬ್ರಾಹ್ಮಾಂಶ್ಚ ವೇದತಶ್ಚಕ್ರೇ ಪುರಾಣಗ್ರಂಥಸಂಗ್ರಹಾನ್ ॥

ಕರ್ಮಮೀಮಾಂಸಾ, ದೇವಮೀಮಾಂಸಾಗಳನ್ನು ರಚನೆ ಮಾಡಿಸಿ, ಪುರಾಣಗಳನ್ನು ಸಂಗ್ರಹ ಮಾಡಿದ್ದಾಗಿ ಹೇಳುತ್ತಾರೆ.

ತಾತ್ಪರ್ಯನಿರ್ಣಯದಲ್ಲಿ ಮೇಲ್ನೋಟಕ್ಕೆ ಈ ಕ್ರಮ ಕಂಡುಬರುತ್ತದೆ.

೧. ವೇದೋದ್ಧಾರ*
೨. ಸರ್ವಶಾಸ್ತ್ರಗಳ ರಚನೆ*
೩. ಬ್ರಹ್ಮಸೂತ್ರಗಳು
೪. ಮಹಾಭಾರತ
೫. ವೇದವಿಭಾಗ*
೬. ಭಾಗವತದ ರಚನೆ
೭. ದೇವಮೀಮಾಂಸಾದ-ಆದ್ಯಂತಸೂತ್ರಗಳ ರಚನೆ
೮. ಪುರಾಣಸಂಗ್ರಹ

(*ಸರ್ವಶಾಸ್ತ್ರಗಳು 'ಬ್ರಹ್ಮತರ್ಕಾದಿಗಳು ಎಂದು ಕೆಲವರು' 'ಪುರಾಣ, ಭಾರತಾದಿಗಳು' ಎಂದು ಕೆಲವರು.)

* ಅನಭಿವ್ಯಕ್ತವಾದ ಮೂಲವೇದಗಳ ಉಪದೇಶ ಮತ್ತು ಅಪಪಾಠದಿಂದ ತಿರೋಹಿತವಾದ ಉಪವೇದಗಳ ಉಪದೇಶ.

*ಉಪವೇದಗಳಿಂದ ಅವಾಂತರ ವೇದಗಳ ವಿಭಾಗ.

**ಟಿಪ್ಪಣೀಕಾರರ ಅಭಿಪ್ರಾಯ**

ಮೇಲೆ ತಿಳಿದಂತೆ ತಾತ್ಪರ್ಯನಿರ್ಣಯದಲ್ಲಿ ಹೇಳಿದ ವೇದವ್ಯಾಸದೇವರ ಗ್ರಂಥರಚನೆಯ ಈ ಕ್ರಮವು ಅನುವ್ಯಾಖ್ಯಾನ ಮೊದಲಾದ ನಿರವಕಾಶ ಪ್ರಮಾಣಗಳಿಗೆ ವಿಪರೀತವಾಗಿ ತೋರುತ್ತದೆ. ಆದ್ದರಿಂದ ಆ ನಿರವಕಾಶ ಪ್ರಮಾಣಗಳಿಗೆ ಅನುಗುಣವಾಗಿಯೇ ಇಲ್ಲಿಯೂ ಗ್ರಂಥನಿರ್ಮಾಣದ ಕ್ರಮವನ್ನು ತಿಳಿಯಬೇಕು ಎಂಬ ಆಶಯದಿಂದ ಈ ಭಾಗಕ್ಕೆ ವ್ಯಾಖ್ಯಾನ ಮಾಡುತ್ತಾ ತಾಮ್ರಪರ್ಣೀ ಆಚಾರ್ಯರು ವೇದವ್ಯಾಸದೇವರು ಗ್ರಂಥರಚನೆ ಮಾಡಿದ ಕ್ರಮವನ್ನು ಹೀಗೆ ಹೇಳುತ್ತಾರೆ-

೧. ವೇದೋದ್ಧಾರ
೨. ವೇದಗಳ ವಿಭಾಗ
೩. ಪುರಾಣಗಳು
೪. ಮಹಾಭಾರತ
೫. ಭಾಗವತ
೬. ದೇವಮೀಮಾಂಸಾದಿಗಳು
೭. ಬ್ರಹ್ಮಸೂತ್ರಗಳು

**ತಾಮ್ರಪರ್ಣೀ ಆಚಾರ್ಯರ ವ್ಯಾಖ್ಯಾನದ ವಾಕ್ಯಗಳು -**

ದ್ವೈಪಾಯನಃ ಸೋಽಥ ಜಗಾಮ ಮೇರುಂ ಚತುರ್ಮುಖಾದ್ಯೈರನುಗಮ್ಯಮಾನಃ ।
ಉದ್ಧೃತ್ಯ ವೇದಾನಖಿಲಾನ್ ಸುರೇಭ್ಯೋ ದದೌ ಮುನಿಭ್ಯಶ್ಚ ಯಥಾದಿಸೃಷ್ಟೌ ॥57॥

''||ಉದ್ಧೃತ್ಯೇತಿ|| ಅಪಪಾಠಾದಿನಾ ತಿರೋಹಿತಾನ್ ಉಚ್ಚಾರಣೇನ ವ್ಯಕ್ತೀಕೃತ್ಯೇತ್ಯರ್ಥಃ । ಮೂಲವೇದವಿವಕ್ಷಾಯಾಂ ತು 'ವೇದಮುತ್ಸನ್ನಂ ಅನಭಿವ್ಯಕ್ತಂ ಅಧ್ಯಾಪನೇನ ವ್ಯಂಜಯನ್' ಇತಿ ತತ್ತ್ವಪ್ರದೀಪರೀತ್ಯಾಽರ್ಥೋ ಬೋಧ್ಯಃ''

ಸರ್ವಾಣಿ ಶಾಸ್ತ್ರಾಣಿ ತಥೈವ ಕೃತ್ವಾ ವಿನಿರ್ಣಯಂ ಬ್ರಹ್ಮಸೂತ್ರಂ ಚಕಾರ ।
ತಚ್ಛುಶ್ರುವುಃ ಬ್ರಹ್ಮಗಿರೀಶಮುಖ್ಯಾಃ ಸುರಾ ಮುನೀನಾಂ ಪ್ರವರಾಶ್ಚ ತಸ್ಮಾತ್ ॥ 58॥

''ತಥೈವ ಅನಂತರಮೇವ ಸರ್ವಾಣಿ ಬ್ರಹ್ಮತರ್ಕಾದೀನಿ ಕೃತ್ವಾ'' ಇತಿ ವರದರಾಜೀಯ.

॥ ಸರ್ವಾಣಿ ಶಾಸ್ತ್ರಾಣೀತಿ ॥ ಪುರಾಣಭಾರತಭಾಗವತದೇವಮೀಮಾಂಸಾದಿಸರ್ವಶಾಸ್ತ್ರಾಣೀತ್ಯರ್ಥಃ । 'ಇತ ಏವ ಪುರಾಣಗೌರಗೌಃ ಸಮಹಾಭಾರತಪಾರಿಜಾತಕೇ । ಸತಿ ಜಾತವತಿ ವ್ಯಜಾಯತ ಪ್ರವರಂ ಸೂತ್ರಗಣಾಮೃತಮ್ ಸ್ವಯಮ್'' ಇತಿ ಮಧ್ವವಿಜಯೋಕ್ತೇಃ । 'ವೇದಮುತ್ಸನ್ನಂ ವ್ಯಂಜಯನ್ ಚತುರ್ಧಾ ವ್ಯಭಜತ್ । ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ' ಇತಿ ಶ್ರೀಮದ್ಭಾಷ್ಯೇ ಶಾಸ್ತ್ರಕರಣಂ ಸೂತ್ರಾತ್ ಪೂರ್ವಂ ನೋಕ್ತಮ್ । ಅತೋ ನ ವಿರೋಧಃ ।

ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಂ ಚಕ್ರೇ ಮಹಾಭಾರತನಾಮಧೇಯಮ್ ।
ವೇದೋತ್ತಮಂ ತಚ್ಚ ವಿಧಾತೃಶಂಕರಪ್ರಧಾನಕೈಸ್ತನ್ಮುಖತಃ ಸುರೈಃ ಶ್ರುತಮ್ ॥ 59॥

'ಸಮಸ್ತಶಾಸ್ತ್ರಾಣೀತ್ಯುಕ್ತಂ ಕ್ರಮೇಣ ವಿವೃಣೋತಿ-ಸಮಸ್ತೇತಿ'

ತತೋ ನೃಣಾಂ ಕಾಲಬಲಾತ್ ಸುಮಂದಮಾಯುರ್ಮತಿಂ ಕರ್ಮ ಚ ವೀಕ್ಷ್ಯ ಕೃಷ್ಣಃ ।
ವಿವ್ಯಾಸ ವೇದಾನ್ ಸ ವಿಭುಶ್ಚತುರ್ಧಾ ಚಕ್ರೇ ತಥಾ ಭಾಗವತಂ ಪುರಾಣಮ್ ॥

॥ ತತೋ ನೃಣಾಮಿತಿ ॥ ಯದ್ಯಪಿ ವೇದವಿಭಾಗೋ ಭಾರತಾತ್ ಪ್ರಾಚೀನಃ । 'ತಪಸಾ ಬ್ರಹ್ಮಚರ್ಯೇಣ ವ್ಯಸ್ಯ ವೇದಂ ಸನಾತನಮ್ । ಇತಿಹಾಸಮಿಮಂ ಚಕ್ರೇ ಪುಣ್ಯಂ ಸತ್ಯವತೀಸುತಃ' ಇತಿ ಭಾರತೇ । 'ವೇದಮುತ್ಸನ್ನಂ ವ್ಯಂಜಯನ್ ಚತುರ್ಧಾ ವ್ಯಭಜತ್' ಇತಿ ಭಾಷ್ಯೋಕ್ತೇಃ । ತಥಾಪಿ ಭಾಗವತೇನ ಸಾಕಂ ಏಕಪ್ರಯೋಜನೋಕ್ತಿಲಾಘವಾಯ ಅತ್ರೋಕ್ತಿಃ''

ದೇವಮೀಮಾಂಸಿಕಾದ್ಯಂತಂ ಕೃತ್ವಾ ಪೈಲಮಥಾದಿಶತ್ ।
ಶೇಷಂ ಚ ಮಧ್ಯಕರಣೇ ಪುರಾಣಾನ್ಯಥ ಚಾಕರೋತ್ ॥

ಶೈವಾನ್ ಪಾಶುಪತಾಚ್ಚಕ್ರೇ ಸಂಶಯಾರ್ಥಂ ಸುರದ್ವಿಷಾಮ್ ।
ವೈಷ್ಣವಾನ್ ಪಂಚರಾತ್ರಾಚ್ಚ ಯಥಾರ್ಥಜ್ಞಾನಸಿದ್ಧಯೇ ।
ಬ್ರಾಹ್ಮಾಂಶ್ಚ ವೇದತಶ್ಚಕ್ರೇ ಪುರಾಣಗ್ರಂಥಸಂಗ್ರಹಾನ್ ॥

ಸುಧಾಯಾಂ ಚ 'ಯತೋ ದೇವಮೀಮಾಂಸಾಂತಿಮಸೂತ್ರದ್ವಯಂ ಭಗವತೈವ ಕೃತಮ್ । ಅಥಾತೋ ದೈವೀ ಇತ್ಯಾದಿ ಉದಾಹೃತಃ । 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಇತಿ ಸೂತ್ರದ್ವಯೇನ ವಿಷ್ಣುರ್ಬ್ರಹ್ಮೇತ್ಯುದಿತಃ । ತದನಂತರಮೇವ 'ಅಥಾತೋ ಬ್ರಹ್ಮಜಿಜ್ಞಾಸಾ' ಇತಿ ಸೂತ್ರಿತತ್ವಾತ್' ಇತಿ । ...॥ಪುರಾಣಾನ್ಯಥೇತಿ॥ ನನು ನಾತ್ರ ಅಥಶಬ್ದಃ ದೇವಮೀಮಾಂಸಾನಂತರ್ಯವಾಚೀ ಬ್ರಹ್ಮಸೂತ್ರಸ್ಯೈವ ತದಂನಂತರಭಾವಿತ್ವೇ ಪ್ರಮಾಣಸ್ಯೋಕ್ತತ್ವಾತ್ । ನಾಪಿ ಬ್ರಹ್ಮಸೂತ್ರವ್ಯವಧಾನೇನ ದೇವಮೀಮಾಂಸಾನಂತರ್ಯಪರಃ ಬ್ರಹ್ಮಸೂತ್ರಾತ್ ಪೂರ್ವಭಾವಿಭಾರತ

ಪೂರ್ವಭಾವಿತ್ವಾತ್ । ತದುಕ್ತಂ ಭಾರತೇ- 'ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ । ಭಾರತಾಖ್ಯಾನಮಕರೋತ್' ಇತಿ । ಗೀತಾಭಾಷ್ಯನರಹರಿತೀರ್ಥೀಯೇ ಚ ''ಸರ್ವವೇದಾದ್ಯರ್ಥೋಪಬೃಂಹಿತಾಂ ಇತ್ಯತ್ರ ಆದಿಪದೇನ ಪುರಾಣಾನಿ । ತದುಕ್ತಂ ಮಾತ್ಸ್ಯೇ- ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ । ಭಾರತಾಖ್ಯಾನಮಖಿಲಂ ಚಕ್ರೇ ತದುಪಬೃಂಹಿತಮ್ । ಇತಿ '' । ಇತಿ । ನ ಚ ಭಾರತಸ್ಯ ಸೂತ್ರಾತ್ ಪೂರ್ವಭಾವಿತ್ವಮೇವಾಸಿದ್ಧಮಿತಿ ವಾಚ್ಯಮ್ । 'ಇತ ಏವ ಪುರಾಣಗೌರಗೌ' ಇತಿ ಮಧ್ವವಿಜಯವಾಕ್ಯೇನ ತತ್ಸಿದ್ಧೇರುಕ್ತತ್ವಾದಿತಿ ಚೇತ್ ಅತ್ರೋಚ್ಯತೇ । 'ಪುರಾಣಾನ್ಯಥ' ಇತ್ಯಥಶಬ್ದಸ್ಯ ಬುದ್ಧಿಸ್ಥವೇದವಿಭಾಗಾದ್ಯಾನಂತರ್ಯಪರಸ್ಯೋಪಪತ್ತೇಃ । ಅಥ ಚ ತಸ್ಮಾದೇವ ವಕ್ಷ್ಯಮಾಣರೀತ್ಯಾ ಅಸುರಾದಿಜನಮೋಹನಾದ್ಯರ್ಥತ್ವಾದೇಃ ವೇತ್ಯರ್ಥೋಪಪತ್ತೇಶ್ಚ ।

ಕೇಚಿತ್ತು 'ಬ್ರಹ್ಮಸೂತ್ರಾನಂತರ್ಯಮೇವ ಪುರಾಣಭಾರತಯೋಃ, ಮಧ್ವವಿಜಯವಚನಂ ತು 'ಭಾರತಪಾರಿಜಾತಮಧುಭೂತಾಮ್' ಇತಿ ಭಾರತಸ್ಯ ಪಾರಿಜಾತಸಾಮ್ಯೋಕ್ತೇಃ, ಸೂತ್ರಗಣಸ್ಯ ನ್ಯಾಯಾಮೃತತ್ವಸ್ಯ ಭಗವತ್ಪಾದೋಕ್ತೇಃ ಅಮೃತಸಾರೂಪ್ಯಲಾಭಾಯ ಶ್ಲೇಷರೂಪೇಣ ಸೂತ್ರಸ್ಯ ಭಾರತಾನಂತರ್ಯಮಾಹ । ನ ವಸ್ತುಗತ್ಯಾ' ಇತ್ಯಾಹುಃ''

ಹೀಗೆ ತಾಮ್ರಪರ್ಣಿಟಿಪ್ಪಣಿಯಲ್ಲಿ ಮೂರುಪ್ರಸಂಗಗಳಲ್ಲಿ ವೇದವ್ಯಾಸರ ಗ್ರಂಥರಚನೆಯ ಕ್ರಮದ ಕುರಿತಾಗಿ ಮಾತನಾಡಿದ್ದಾರೆ. ಮೂರೂ ಸ್ಥಳಗಳಲ್ಲಿಯ ಗ್ರಂಥರಚನಾಕ್ರಮದ ಉಪಪಾದನೆಯ ರೀತಿಯನ್ನು ನೋಡಿದಾಗ ಬರುವ ಅಭಿಪ್ರಾಯವನ್ನು ಮುಂದೆ ನೀಡಲಾಗಿದೆ.

## ೧, ೨. ವೇದೋದ್ಧಾರ ಹಾಗೂ ವೇದವಿಭಾಗ

ಮೊದಲು ಅವ್ಯಕ್ತವಾದ ಮೂಲವೇದಗಳ ಉಪದೇಶ ಅಥವಾ ಅಪಪಾಠದಿಂದ ಅವ್ಯಕ್ತವಾದ ಉಪವೇದಗಳ ಉಪದೇಶ. ನಂತರ ಉಪವೇದಗಳಿಂದ ಮಾಡುವ ವೇದಗಳ ವಿಭಾಗ ಇವೆರಡೂ ಎಲ್ಲದಕ್ಕೂ ಮೊದಲು ಆದದ್ದು. ಬ್ರಹ್ಮಸೂತ್ರ, ಭಾರತರಚನೆಗಳ ನಂತರ 62ನೆಯ ಶ್ಲೋಕದಲ್ಲಿ ಶ್ರೀಮದಾಚಾರ್ಯರು ಹೇಳಿದ ವೇದವಿಭಾಗವೂ ಬ್ರಹ್ಮಸೂತ್ರ, ಭಾರತಗಳ ರಚನೆಗಿಂತಲೂ ಮುಂಚಿತವಾಗಿಯೇ ಆದದ್ದು ಎಂದು ಇವರ ಅಭಿಪ್ರಾಯ.

ಈ ವಿಷಯಕ್ಕೆ ಅವರು -

ತಪಸಾ ಬ್ರಹ್ಮಚರ್ಯೇಣ ವ್ಯಸ್ಯ ವೇದಂ ಸನಾತನಮ್ ।
ಇತಿಹಾಸಮಿಮಂ ಚಕ್ರೇ ಪುಣ್ಯಂ ಸತ್ಯವತೀಸುತಃ ॥ ಭಾರತ 1.1.38 ।

ಎಂಬ ಭಾರತವಚನವನ್ನು, 'ವೇದಮುತ್ಸನ್ನಂ ವ್ಯಂಜಯನ್ ಚತುರ್ಧಾ ವ್ಯಭಜತ್' ಎಂಬ ಸೂತ್ರಭಾಷ್ಯದ ವಚನವನ್ನು ಪ್ರಮಾಣವಾಗಿ ಕೊಡುತ್ತಾರೆ.

ಮಹಾಭಾರತದ ಮೇಲಿನ ವಾಕ್ಯದಲ್ಲಿ ಸ್ಪಷ್ಟವಾಗಿ 'ವೇದಂ ವ್ಯಸ್ಯ' ವೇದ ವಿಭಾಗವನ್ನು ಮಾಡಿ 'ಇಮಂ ಇತಿಹಾಸಂ ಚಕ್ರೇ' ಈ ಮಹಾಭಾರತವನ್ನು ರಚಿಸಿದರು ಎಂಬುದಾಗಿ ಇದೆ.

**ಭಾಷ್ಯಾರ್ಥ-** ಉತ್ಸನ್ನಂ= ಅಪಪಾಠಾದಿಗಳಿಂದ ಮರೆಯಾದ, ವೇದಂ= ಮೂಲವೇದದಿಂದ ಋಕ್-ನಿಗದಾದಿರೂಪವಾಗಿ ನಾಲ್ಕುಬಗೆಯಾಗಿ ಮೊದಲೇ ವಿಭಕ್ತವಾದ ಉಪವೇದವನ್ನು, ವ್ಯಂಜಯನ್= ವ್ಯಕ್ತಮಾಡುತ್ತ, ಚತುರ್ಧಾ=ಪುನಃ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದವೆಂದು ನಾಲ್ಕು ಬಗೆಯಾಗಿ ವ್ಯಭಜತ್=ವಿಭಾಗಮಾಡಿದನು. ಇದಕ್ಕೆ 'ಅವಾಂತರವೇದ' ಎಂದು ಕರೆಯುತ್ತಾರೆ.

ಹೀಗೆ ಭಾಷ್ಯವಾಕ್ಯದಲ್ಲಿ ಉಪವೇದಗಳ ಉದ್ಧಾರ, ಅವುಗಳಿಂದ ಮಾಡುವ ವೇದವಿಭಾಗ ಎರಡನ್ನೂ ಒಟ್ಟಿಗೆ ಹೇಳಿದ್ದಾರೆ.

ಆದ್ದರಿಂದ ತಾತ್ಪರ್ಯನಿರ್ಣಯದಲ್ಲಿ ಬ್ರಹ್ಮಸೂತ್ರ-ಭಾರತರಚನೆಯ ಬಳಿಕ ಹೇಳಿದ ವೇದವಿಭಾಗವು ಮಹಾಭಾರತರಚನೆಗಿಂತಲೂ ಪೂರ್ವದಲ್ಲಿಯೇ ಆದದ್ದು ಎಂದು ಸಿದ್ಧವಾಗುತ್ತದೆ.

**೩. ವೇದ ವಿಭಾಗದ ನಂತರದಲ್ಲಿಯೇ ಪುರಾಣಗಳ ರಚನೆ.**

ತಾತ್ಪರ್ಯನಿರ್ಣಯದಲ್ಲಿ ಪುರಾಣಗಳ ರಚನೆ ಕೊನೆಗೆ ಹೇಳಿದ್ದಾರೆ. ಆದರೆ ತಾಮ್ರಪರ್ಣೀ ಟಿಪ್ಪಣಿಯಲ್ಲಿ ವೇದವಿಭಾಗದ ನಂತರದಲ್ಲಿ ಭಾರತಭಾಗವತಗಳಿಗಿಂತಲೂ ಮುಂಚೆ ಪುರಾಣಗಳ ರಚನೆಯಾದದ್ದು ಎಂದು ಹೇಳುತ್ತಾರೆ-

'ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ ।
ಭಾರತಾಖ್ಯಾನಮಕರೋತ್................॥'

ಎಂಬ ಭಾರತದ ವಾಕ್ಯವನ್ನು, ''ಸರ್ವವೇದಾದ್ಯರ್ಥೋಪಬೃಂಹಿತಾಂ ಇತ್ಯತ್ರ **ಆದಿಪದೇನ ಪುರಾಣಾನಿ**' ತದುಕ್ತಂ ಮಾತ್ಸ್ಯೇ- ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ । ಭಾರತಾಖ್ಯಾನಮಖಿಲಂ ಚಕ್ರೇ ತದುಪಬೃಂಹಿತಮ್ ॥'' ಎಂಬ ನರಹರಿತೀರ್ಥರ ಗೀತಾಭಾಷ್ಯಟೀಕೆಯನ್ನು ಆಧಾರವಾಗಿ ನೀಡುತ್ತಾರೆ.

ತಾಮ್ರಪರ್ಣೀಟಿಪ್ಪಣಿಯ ಅಭಿಪ್ರಾಯ ಇಷ್ಟು. 'ಶೇಷಂ ಚ ಮಧ್ಯಕರಣೇ ಪುರಾಣಾನ್ಯಥ ಚಾಕರೋತ್' ಎಂಬ ನಿರ್ಣಯವಚನದಲ್ಲಿ 'ಅಥ= ದೇವಮೀಮಾಂಸಾ ನಂತರದಲ್ಲಿ, ಪುರಾಣಾನಿ ಅಕರೋತ್= ಪುರಾಣಗಳನ್ನು ರಚಿಸಿದರು' ಎಂದು ದೇವಮೀಮಾಂಸಾ ನಂತರ ಪುರಾಣಗಳ ರಚನೆಯನ್ನು ಹೇಳಿದ್ದಾರೆ. ಆದರೆ ಅನುವ್ಯಾಖ್ಯಾನ-ಸುಧಾಗಳಲ್ಲಿ ನಿರವಕಾಶವಾಗಿ ದೇವಮೀಮಾಂಸಾ ನಂತರದಲ್ಲಿ ಬ್ರಹ್ಮಸೂತ್ರಗಳ ರಚನೆಯನ್ನು ಹೇಳಿದ್ದಾರೆ. ಆದ್ದರಿಂದ ದೇವಮೀಮಾಂಸಾ ನಂತರ ಪುರಾಣರಚನೆ ಎಂದು ಹೇಳಲಾಗುವದಿಲ್ಲ.

ಇನ್ನು 'ದೇವಮೀಮಾಂಸಾ-ಬ್ರಹ್ಮಸೂತ್ರಗಳ ನಂತರ ಪುರಾಣರಚನೆ' ಎಂದೂ ಹೇಳಲು ಬರುವದಿಲ್ಲ. ಮಹಾಭಾರತ ಹಾಗು ನರಹರಿತೀರ್ಥರ ಟೀಕೆಯಲ್ಲಿ ಭಾರತಕ್ಕಿಂತಲೂ ಮೊದಲು ಪುರಾಣಗಳ ರಚನೆಯನ್ನು ಹೇಳಿದ್ದಾರೆ. ಮತ್ತು ಮಹಾಭಾರತ ಬ್ರಹ್ಮಸೂತ್ರಕ್ಕಿಂತ ಮುಂಚೆ ರಚಿಸಿದ್ದಾಗಿ ಸುಮಧ್ವವಿಜಯದ 'ಇತ ಏವ ಪುರಾಣಗೌರಗೌ' ಎಂಬ ವಚನದಲ್ಲಿ ಹೇಳಿದ್ದಾರೆ. ಅದಕ್ಕಾಗಿ 'ಪುರಾಣಾನ್ಯಥ ಚಾಕರೋತ್' ಎಂಬಲ್ಲಿಯ 'ಅಥ' ಶಬ್ದಕ್ಕೆ ಬುದ್ಧಿಸ್ಥವಾದ 'ವೇದವಿಭಾಗದ ನಂತರ' ಎಂಬ ಅರ್ಥವನ್ನೇ ಹೇಳಬೇಕು. ಆದ್ದರಿಂದ ವೇದೋದ್ಧಾರ, ವೇದವಿಭಾಗಳ ನಂತರದಲ್ಲಿಯೇ ಪುರಾಣಗಳ ರಚನೆ ಎಂದು ಹೇಳಬೇಕು.

### ೪. ಮಹಾಭಾರತದ ರಚನೆ

ತಾತ್ಪರ್ಯನಿರ್ಣಯದಲ್ಲಿ ಬ್ರಹ್ಮಸೂತ್ರರಚನೆಯ ಬಳಿಕ ಮಹಾಭಾರತ ರಚಿಸಿದ್ದಾಗಿ ಹೇಳಿದ್ದಾರೆ. ಆದರೆ ಮೇಲೆ ಉದಾಹರಿಸಿದ ಮಹಾಭಾರತ ಹಾಗು ಮತ್ಸ್ಯಪುರಾಣದ ವಚನಗಳಲ್ಲಿ ಪುರಾಣರಚನೆಯ ಬಳಿಕ ಮಹಾಭಾರತದ ರಚನೆಯನ್ನು ಹೇಳಿದ್ದಾರೆ. ಮತ್ತು ಸುಮಧ್ವವಿಜಯದಲ್ಲಿ ಸೂತ್ರಕ್ಕಿಂತಲೂ ಮೊದಲು ಮಹಾಭಾರತ ಬರೆದದ್ದಾಗಿ ಹೇಳಿದ್ದಾರೆ. ಆದ್ದರಿಂದ ಪುರಾಣಗಳ ನಂತರ ಬ್ರಹ್ಮಸೂತ್ರಗಳ ಮೊದಲು ಭಾರತರಚನೆ ಎಂದು ಹೇಳಬೇಕು.

### ೫. ಭಾಗವತದ ರಚನೆ

ಭಾಗವತದಲ್ಲಿ 'ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ । ಏವಂ ಪ್ರವೃತ್ತಸ್ಯ ಸದಾ ಭೂತಾನಾಂ ಶ್ರೇಯಸಿ ದ್ವಿಜಾಃ ॥ ಸರ್ವಾತ್ಮಕೇನಾಪಿ ಯದಾ ನಾತುಷ್ಯದ್ ಹೃದಯಂ ತತಃ' 1.4.25. ಇತ್ಯಾದಿಯಾಗಿ ಭಾರತದ ರಚನೆಯಾದ ಮೇಲೆ ಭಾಗವತಪುರಾಣದ ರಚನೆಯನ್ನು ಹೇಳಿದ್ದಾರೆ.

### ೬, ೭ ದೇವಮೀಮಾಂಸಾ ರಚನೆ, ಬ್ರಹ್ಮಸೂತ್ರಗಳ ರಚನೆ

ತಾತ್ಪರ್ಯನಿರ್ಣಯದಲ್ಲಿ ಭಾರತಭಾಗವತ ರಚನೆಗಿಂತಲೂ ಪೂರ್ವದಲ್ಲಿ ಬ್ರಹ್ಮಸೂತ್ರಗಳ ರಚನೆಯನ್ನು ಹೇಳಲಾಗಿದೆ. ಆದರೆ ಭಾರತಭಾಗವತಗಳ ರಚನೆಯಾದ ಬಳಿಕ ದೇವಮೀಮಾಂಸಾನಿರ್ಮಾಣ. ನಂತರ ಬ್ರಹ್ಮಸೂತ್ರಗಳ ನಿರ್ಮಾಣ ಎಂದು ಹೇಳಬೇಕೆಂದು ತಾಮ್ರಪರ್ಣೀಟಿಪ್ಪಣಿಯ ಅಭಿಪ್ರಾಯ.

ಅದಕ್ಕೆ ಪೋಷಕವಾಗಿ ಅನುವ್ಯಾಖ್ಯಾನ, ಸುಧಾವಾಕ್ಯಗಳನ್ನು ಉದಾಹರಿಸುತ್ತಾರೆ.

ಸ್ವಯಂ ಭಗವತಾ ವಿಷ್ಣುಃ ಬ್ರಹ್ಮೇತ್ಯೇತತ್ಪುರೋದಿತಮ್ ।
ಸ ವಿಷ್ಣುರಾಹ ಹೀತ್ಯಂತೇ ದೇವಶಾಸ್ತ್ರಸ್ಯ ತೇನ ಹಿ ॥

ಆದ್ಯಂತಂ ದೇವಶಾಸ್ತ್ರಸ್ಯ ಸ್ವಯಂ ಭಗವತಾ ಕೃತಮ್ ।
ಮಧ್ಯಂ ತದಾಜ್ಞಯಾ ಪೈಲಶೇಷಾಭ್ಯಾಂ ಕೃತಮಂಜಸಾ ॥
ಅತಸ್ತತ್ರೈವ ವಿಷ್ಣುತ್ವಸಿದ್ಧೇರ್ಬ್ರಹ್ಮೇತ್ಯಸೂಚಯತ್ ॥'

ಸುಧಾ-'ಯತೋ ದೇವಮೀಮಾಂಸಾಂತಿಮಸೂತ್ರದ್ವಯಂ ಭಗವತೈವ ಕೃತಮ್ । ಅಥಾತೋ ದೈವೀತ್ಯಾದಿ ಉದಾಹೃತಃ । 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಇತಿ ಸೂತ್ರದ್ವಯೇನ ವಿಷ್ಣುರ್ಬ್ರಹ್ಮೇತ್ಯುದಿತಃ । ತದನಂತರಮೇವ 'ಅಥಾತೋ ಬ್ರಹ್ಮಜಿಜ್ಞಾಸಾ' ಇತಿ ಸೂತ್ರಿತತ್ವಾತ್ ।' ಎಂದು.

ಹೀಗೆ ತಾತ್ಪರ್ಯನಿರ್ಣಯದಲ್ಲಿ ಹೇಳಿದ ವೇದವ್ಯಾಸರ ಗ್ರಂಥರಚನಾ ಕ್ರಮವನ್ನು ಅನುವ್ಯಾಖ್ಯಾನ ಮೊದಲಾದ ಪ್ರಮಾಣಗಳಿಗೆ ಅನುಗುಣವಾಗಿ ಹೊಂದಿಸಿ ತಿಳಿದುಕೊಳ್ಳಬೇಕು ಎನ್ನುವುದು ತಾಮ್ರಪರ್ಣೀಆಚಾರ್ಯರ ಅಭಿಪ್ರಾಯ.

ತಾಮ್ರಪರ್ಣೀಟಿಪ್ಪಣಿಯಲ್ಲಿ ಹೇಳಿದ ಗ್ರಂಥರಚನೆಯ ಈ ಕ್ರಮವನ್ನು ಸ್ವಲ್ಪ ಚಿಂತಿಸೋಣ -

...ಉದ್ಧೃತ್ಯ ವೇದಾನಖಿಲಾನ್ ಸುರೇಭ್ಯೋ ದದೌ ಮುನಿಭ್ಯಶ್ಚ ಯಥಾದಿಸೃಷ್ಟೌ ॥57॥

...ಸರ್ವಾಣಿ ಶಾಸ್ತ್ರಾಣಿ ತಥೈವ ಕೃತ್ವಾ ವಿನಿರ್ಣಯಂ ಬ್ರಹ್ಮಸೂತ್ರಂ ಚಕಾರ ॥58॥

...ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಂ ಚಕ್ರೇ ಮಹಾಭಾರತನಾಮಧೇಯಮ್ ॥59॥

ತತೋ ನೃಣಾಂ ಕಾಲಬಲಾತ್ ಸುಮಂದಂ ಆಯುರ್ಮತಿಂ ಕರ್ಮ ಚ ವೀಕ್ಷ್ಯ ಕೃಷ್ಣಃ ।
ವಿವ್ಯಾಸ ವೇದಾನ್ ಸ ವಿಭುಶ್ಚತುರ್ಧಾ ಚಕ್ರೇ ತಥಾ ಭಾಗವತಂ ಪುರಾಣಮ್ ॥62॥

ದೇವಮೀಮಾಂಸಕಾದ್ಯಂತಂ ಕೃತ್ವಾ ಪೈಲಮಥಾದಿಶತ್ ।
ಶೇಷಂ ಚ ಮಧ್ಯಕರಣೇ ಪುರಾಣಾನ್ಯಥ ಚಾಕರೋತ್ ॥82॥

ಶೈವಾನ್ ಪಾಶುಪತಾಚ್ಚಕ್ರೇ ಸಂಶಯಾರ್ಥಂ ಸುರದ್ವಿಷಾಮ್ ।
ವೈಷ್ಣವಾನ್ ಪಂಚರಾತ್ರಾಂಶ್ಚ ಯಥಾರ್ಥಜ್ಞಾನಸಿದ್ಧಯೇ ।
ಬ್ರಾಹ್ಮಾಂಶ್ಚ ವೇದತಶ್ಚಕ್ರೇ ಪುರಾಣಗ್ರಂಥಸಂಗ್ರಹಾನ್ ॥83॥

**ಟಿಪ್ಪಣಿಯ ಸಮಗ್ರಾಭಿಪ್ರಾಯ**

ತಾಮ್ರಪರ್ಣೀಟಿಪ್ಪಣಿಯಲ್ಲಿ ೫೮ನೆಯ ಶ್ಲೋಕದಲ್ಲಿರುವ 'ಸರ್ವಾಣಿ ಶಾಸ್ತ್ರಾಣಿ' ಎನ್ನುವದಕ್ಕೆ 'ಪುರಾಣಭಾರತಭಾಗವತದೇವಮೀಮಾಂಸಾದಿಸರ್ವಶಾಸ್ತ್ರಾಣೀತ್ಯರ್ಥಃ' ಎಂದು ಅರ್ಥ ಬರೆಯುತ್ತಾರೆ. ತಾಮ್ರಪರ್ಣೀಟಿಪ್ಪಣಿಯ ಪ್ರಕಾರ ತಾತ್ಪರ್ಯನಿರ್ಣಯದಲ್ಲಿ ವೇದವಿಭಾಗ, ಪುರಾಣ, ಭಾರತ, ಭಾಗವತ, ದೇವಮೀಮಾಂಸಾಗಳನ್ನು ಬ್ರಹ್ಮಸೂತ್ರರಚನೆಯಾದಮೇಲೆ ರಚಿಸಿದ್ದಾಗಿ ಹೇಳಿದ್ದರೂ ಇತರ ಪ್ರಮಾಣಗಳಿಗೆ ಅನುಗುಣವಾಗಿ ಬ್ರಹ್ಮಸೂತ್ರಗಳಿಂತ ಮುಂಚೆಯೇ ಈ ಎಲ್ಲ ಗ್ರಂಥಗಳ ರಚನೆ ಎಂದು ತಿಳಿಯಬೇಕು. ಇದಕ್ಕೆ ಅವರು 'ಇತ ಏವ ಪುರಾಣಗೌರಗೌ' ಎಂಬ ಸುಮಧ್ವವಿಜಯದ ವಚನವನ್ನು ಆಧಾರವಾಗಿ ನೀಡುತ್ತಾರೆ.

ಇನ್ನು, ಸೂತ್ರಭಾಷ್ಯದಲ್ಲಿ 'ವೇದಮುತ್ಸನ್ನಂ ವ್ಯಂಜಯನ್ ಚತುರ್ಧಾ ವ್ಯಭಜತ್ । ತದರ್ಥ-ನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ' ಎಂದು ವೇದವಿಭಾಗದ ನಂತರದಲ್ಲಿಯೇ ಬ್ರಹ್ಮಸೂತ್ರ ಮಾಡಿದ್ದಾಗಿ ಹೇಳಿದ್ದಾರೆ. ಆದರೆ ಅಲ್ಲಿ ಪುರಾಣಭಾರತಾದಿಶಾಸ್ತ್ರನಿರ್ಮಾಣವನ್ನು ಸೂತ್ರಗಳಿಗಿಂತ ಮುಂಚೆ ಎಂದಾಗಲಿ ನಂತರ ಎಂದಾಗಲಿ ಹೇಳಿಲ್ಲ. ಆದ್ದರಿಂದ ಭಾಷ್ಯವಾಕ್ಯದ ವಿರೋಧವೂ ಇಲ್ಲ.

ಈ ರೀತಿ ತಾಮ್ರಪರ್ಣೀಟಿಪ್ಪಣಿಯಲ್ಲಿ ಬೇರೆ ಆಕರಗ್ರಂಥಗಳಿಗೆ ಅನುಗುಣವಾಗಿ ವೇದವ್ಯಾಸದೇವರ ಗ್ರಂಥರಚನಾಕ್ರಮವನ್ನು ಹೇಳುತ್ತಾರೆ.

ಟಿಪ್ಪಣೀಕಾರರು ಹೇಳುವ ಈ ಕ್ರಮವನ್ನು ಭಾಗವತ, ಅನುವ್ಯಾಖ್ಯಾನ, ಸುಧಾ ಮೊದಲಾದ ಆಕರಗಳಿಗನುಗುಣವಾಗಿ ಪರಿಶೀಲಿಸೋಣ.

ಶ್ರೀಮದಾಚಾರ್ಯರು ೬೨ ನೆಯ ಶ್ಲೋಕದಲ್ಲಿ ಹೇಳುವ ವೇದವಿಭಾಗ ೫೭ ನೆಯ ಶ್ಲೋಕದಲ್ಲಿ ಹೇಳಿದ ವೇದೋದ್ಧಾರದ ಜೊತೆಯಲ್ಲಿಯೇ ಆಗಿದೆ ಎಂದು ತಿಳಿಯಬೇಕು. 'ವೇದಮುತ್ಸನ್ನಂ ವ್ಯಂಜಯನ್ ಚತುರ್ಧಾ ವ್ಯಭಜತ್' ಎಂಬ ಭಾಷ್ಯವಚನ, 'ತಪಸಾ ಬ್ರಹ್ಮಚರ್ಯೇಣ ವ್ಯಸ್ಯ ವೇದಂ ಸನಾತನಮ್ । ಇತಿಹಾಸಮಿಮಂ ಚಕ್ರೇ ಪುಣ್ಯಂ ಸತ್ಯವತೀಸುತಃ 1.1.38' ಎಂಬ ಭಾರತವಚನ, ಇವೆರಡೂ ವಚನಗಳು ಮೇಲಿನ ತಾಮ್ರಪರ್ಣೀಟಿಪ್ಪಣಿಯ ಅಭಿಪ್ರಾಯವನ್ನು ಪೋಷಿಸುತ್ತವೆ. ಭಾಷ್ಯವಾಕ್ಯದಲ್ಲಿ ವೇದವಿಭಾಗವು ವೇದೋದ್ಧಾರದ ಜೊತೆ ಎಂದು ಹೇಳಿದ್ದಾರೆ. ಭಾರತವಚನದಲ್ಲಿ ವೇದವಿಭಾಗ ಭಾರತಕ್ಕಿಂತಲೂ ಮೊದಲು ಎಂದು ಹೇಳಿದ್ದಾರೆ.

ಭಾಗವತವೂ ಭಾರತಪುರಾಣಗಳಿಗಿಂತಲೂ ಮೊದಲು ವೇದವಿಭಾಗ ಎಂಬ ಟಿಪ್ಪಣೀಕಾರರ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

ವ್ಯದಧಾದ್ಯಜ್ಞಸಂತತ್ಯೈ ವೇದಮೇಕಂ ಚತುರ್ವಿಧಮ್ ॥
ಋಗ್ಯಜುಸ್ಸಾಮಾಥರ್ವಾಖ್ಯಾ ವೇದಾಶ್ಚತ್ವಾರ ಉದ್ಧೃತಾಃ ।
ಇತಿಹಾಸಪುರಾಣಂ ಚ ಪಂಚಮೋ ವೇದ ಉಚ್ಯತೇ ॥ ಭಾಗ.1.4.18-19॥

**ಪುರಾಣ-ಭಾರತಗಳಲ್ಲಿ ಯಾವುದು ಮೊದಲು?**

ತಾಮ್ರಪರ್ಣೀಆಚಾರ್ಯರು ವೇದವಿಭಾಗದ ನಂತರ ಪುರಾಣಭಾರತಗಳಲ್ಲಿ ಮೊದಲು ಪುರಾಣದ ರಚನೆ ಆಮೇಲೆ ಭಾರತರಚನೆ ಎಂದು ಅಭಿಪ್ರಾಯಪಡುತ್ತಾರೆ. ಅದರಲ್ಲಿಯೂ ಹದಿನೆಂಟು ಪುರಾಣಗಳಲ್ಲಿ ೧೭ಪುರಾಣಗಳ ರಚನೆ ಮೊದಲು. ಆಮೇಲೆ ಭಾರತನಿರ್ಮಾಣ. ನಂತರ ಭಾಗವತದ ರಚನೆ ಎಂದು ಹೇಳುತ್ತಾರೆ. ಅದಕ್ಕೆ 'ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ । ಭಾರತಾಖ್ಯಾನಮಕರೋತ್..॥' ಎಂಬ ಭಾರತವಚನವನ್ನು, ಗೀತಾಭಾಷ್ಯದ ನರಹರಿತೀರ್ಥೀಯ ಟೀಕೆಯನ್ನು ಪ್ರಮಾಣವಾಗಿ ಕೊಡುತ್ತಾರೆ. ಆ ವಚನಗಳನ್ನು ಹಿಂದೆ ಉದಾಹರಿಸಲಾಗಿದೆ.

ಆದರೆ, 'ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ' 'ಎಲ್ಲ ಪುರಾಣಗಳ ರಚನೆಯ ಬಳಿಕ ಭಾರತದ ರಚನೆ' ಎಂಬ ಭಾರತದ ಮಾತು ಭಾಗವತಕ್ಕೆ ವಿರುದ್ಧವಾಗುತ್ತದೆ. ಭಾಗವತದಲ್ಲಿ 'ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ । ಏವಂ ಪ್ರವೃತ್ತಸ್ಯ ಸದಾ ಭೂತಾನಾಂ ಶ್ರೇಯಸಿ ದ್ವಿಜಾಃ ॥ ಸರ್ವಾತ್ಮಕೇನಾಪಿ ಯದಾ ನಾತುಷ್ಯದ್ ಹೃದಯಂ ತತಃ' 1.4.25. ಇತ್ಯಾದಿಯಾಗಿ ಭಾರತದ ರಚನೆಯಾದಮೇಲೆ ಭಾಗವತಪುರಾಣದ ರಚನೆಯನ್ನು ಹೇಳಿದ್ದಾರೆ. ವಿರೋಧಪರಿಹಾರಕ್ಕಾಗಿ 'ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ' ಎಂಬ ಭಾರತದ ಮಾತಿಗೆ ಭಾಗವತ ಬಿಟ್ಟು ಉಳಿದ ಹದಿನೇಳು ಪುರಾಣಗಳು ಎಂದು ಅರ್ಥೈಸಬೇಕು .

'ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ' ಎಂಬ ಭಾರತವಚನಕ್ಕೆ ಭಾಗವತ ಬಿಟ್ಟು ಉಳಿದ ಹದಿನೇಳು ಪುರಾಣ ಎಂದು ಅರ್ಥೈಸುವದಕ್ಕೆ ನಿರವಕಾಶವಾದ ಪದ್ಮಪುರಾಣವಚನವು ಆಧಾರವಾಗಿದೆ. ಪದ್ಮಪುರಾಣದ ವಚನ-

**ದಶಸಪ್ತಪುರಾಣಾನಿ ಕೃತ್ವಾ ಸತ್ಯವತೀಸುತಃ ।**
**ನಾಪ್ತವಾನ್ ಮನಸ್ತೋಷಂ ಭಾರತೇನಾಪಿ ಭಾಮಿನಿ ॥ ಪದ್ಮಪುರಾಣ.ಉತ್ತರಖಂಡ.198.95.**

ಹೀಗಾಗಿ 17 ಪುರಾಣಗಳ ರಚನೆ ಮೊದಲು. ಆಮೇಲೆ ಭಾರತ ನಿರ್ಮಾಣ. ಬಳಿಕ ಭಾಗವತಪುರಾಣದ ನಿರ್ಮಾಣ ಎಂದು ನಿರ್ಣಯಿಸಬಹುದು.

ವಂಶೀಧರರು ತಮ್ಮ ವ್ಯಾಖ್ಯಾನದಲ್ಲಿ ಇದೇ ರೀತಿಯಾದ ಪ್ರಶ್ನೆಯನ್ನು ಮಾಡಿಕೊಂಡು ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ.

**''ಕೃತವಾನ್ ಭಾರತಮ್'' ಇತ್ಯಸ್ಯ ಯದ್ವಿರೋಧಿ ಮಾತ್ಸ್ಯೇ ''ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ । ಭಾರತಾಖ್ಯಾನಮಖಿಲಂ ಚಕ್ರೇ ತದುಪಬೃಂಹಿತಮ್ ॥'' ಇತಿ, ಅತ್ರ ''ಸ ಸಂಹಿತಾಂ ಭಾಗವತೀಂ ಕೃತ್ವಾ'' ಇತಿ ಸಪ್ತಮಾಧ್ಯಾಯವಾಕ್ಯೇನ ಸಮಾಧಾನಂ ದೃಶ್ಯತೇ । ಪ್ರಥಮತಃ ಸಾಮಾನ್ಯತಃ ಕೃತ್ವಾ ಪಶ್ಚಾತ್ ನಾರದೋಪದೇಶತೋಽನುಕ್ರಮ್ಯ ತತ್ಸಮ್ಮತ್ಯಾನುಕ್ರಮೇಣ ವಿಶೇಷತಃ ಕೃತ್ವೇತ್ಯವಿರೋಧಃ । ನಾರದೇನಾಪಿ ''ಭವತಾನುದಿತಪ್ರಾಯಂ'' ಇತ್ಯುಕ್ತೇಃ ಸಾಮಾನ್ಯತಸ್ತೂಕ್ತಮೇವೇತಿ ಸೂಚಿತಮ್ ।'' ವಂಶೀಧರಃ (ಭಾಗ.1.5.3-4)**

ಅವರ ಅಭಿಪ್ರಾಯ ಇಷ್ಟು . ಭಾರತ ರಚಿಸಿದ ಮೇಲೆ ಭಾಗವತದ ರಚನೆ ಎಂದಾದರೆ 'ಎಲ್ಲ ಪುರಾಣಗಳ ರಚನೆಯ ಬಳಿಕ ಭಾರತದ ರಚನೆ' ಎಂದು ಹೇಳುವ ಮತ್ಸ್ಯಪುರಾಣದ ವಿರೋಧ ಬರುತ್ತದೆ. ಅದನ್ನು ಪರಿಹರಿಸುವದಕ್ಕೆ 'ವ್ಯಾಸರು ಮೊದಲು ಭಾಗವತವನ್ನು ಸಾಮಾನ್ಯವಾಗಿ ರಚನೆ ಮಾಡಿ ಭಾರತವನ್ನು ಬರೆದರು. ನಂತರ ಭಾಗವತವನ್ನು ವಿಶೇಷವಾಗಿ ಬರೆದರು' ಎಂದು ಸಮಾಧಾನವನ್ನು ಹೇಳುತ್ತಾರೆ.

ವಂಶೀಧರರ ವಿರೋಧಪರಿಹಾರದ ಕ್ರಮಕ್ಕಿಂತಲೂ ತಾಮ್ರಪರ್ಣೀಟಿಪ್ಪಣಿಯಲ್ಲಿ ಹೇಳುವ ಕ್ರಮ ನಿರವಕಾಶವಾದ ಪದ್ಮಪುರಾಣವಚನಕ್ಕೆ ಅನುಗುಣವಾಗಿದೆ ಸಮಂಜಸವೂ ಆಗಿದೆ.

### ಬ್ರಹ್ಮಸೂತ್ರ, ಭಾರತ ಯಾವುದು ಮೊದಲು?

ಸುಮಧ್ವವಿಜಯದಲ್ಲಿ ಬಂದ -

**ಇತ ಏವ ಪುರಾಣಗೌರಗೌ ಸಮಹಾಭಾರತಪಾರಿಜಾತಕೇ ।**
**ಸತಿ ಜಾತವತಿ ವ್ಯಜಾಯತ ಪ್ರವರಂ ಸೂತ್ರಗಣಾಮೃತಂ ಸ್ವಯಮ್ ॥**

ಎಂಬ ಮಾತಿನ ಆಧಾರದಲ್ಲಿ ಬ್ರಹ್ಮಸೂತ್ರಕ್ಕಿಂತಲೂ ಮೊದಲು ಭಾರತ ರಚಿಸಿದ್ದಾಗಿ ಹೇಳುತ್ತಾರೆ. ತಾಮ್ರಪರ್ಣೀಆಚಾರ್ಯರು ತಾವು ಹೇಳಿದ ಗ್ರಂಥರಚನಾಕ್ರಮವನ್ನು ಉಪಪಾದನೆ ಮಾಡುವದಕ್ಕೆ ಸುಮಧ್ವವಿಜಯದ ವಚನವನ್ನು ಪ್ರಮುಖ ಪ್ರಮಾಣವಾಗಿ ಪರಿಗಣಿಸಿದ್ದಾರೆ. ವೇದವ್ಯಾಸದೇವರು ಮೊದಲು ಮಾಡುವ ವೇದೋದ್ಧಾರ, ಕೊನೆಯಲ್ಲಿ ರಚಿಸುವ ಬ್ರಹ್ಮಸೂತ್ರಗಳ ಮಧ್ಯದಲ್ಲಿ ವೇದವಿಭಾಗ, ಪುರಾಣ-ಭಾರತ-ಭಾಗವತ-ದೇವಮೀಮಾಂಸಾಗಳನ್ನು ರಚಿಸಿದರು ಎನ್ನುವದಕ್ಕೆ ಸೂತ್ರಭಾಷ್ಯ , ಅನುವ್ಯಾಖ್ಯಾನ, ಸುಧಾ, ಭಾರತ ಮೊದಲಾದ ಗ್ರಂಥಗಳನ್ನು ಆಧಾರವಾಗಿ ನೀಡುತ್ತಾರೆ. ಅದರ ಜೊತೆಯಲ್ಲಿ ಸುಮಧ್ವವಿಜಯದ ವಚನವನ್ನೂ ಪ್ರಧಾನ ಆಧಾರವಾಗಿ ನೀಡುತ್ತಾರೆ.

ವ್ಯಾಸರು ಮಾಡುವ ವೇದೋದ್ಧಾರ-ವೇದವಿಭಾಗ ಒಟ್ಟಿಗೆ ಆದದ್ದನ್ನು ಸಮರ್ಥಿಸುವದಕ್ಕೆ ಭಾಷ್ಯವಾಕ್ಯ-ಭಾರತವಚನಗಳನ್ನು ಉದಾಹರಿಸುತ್ತಾರೆ. ಉದಾಹರಿಸಿದ ವಚನಗಳೂ ಆ ಪ್ರಮೇಯವನ್ನು ಸಮರ್ಥವಾಗಿ ಉಪಪಾದಿಸುತ್ತವೆ.

ಆದರೆ ವೇದವಿಭಾಗವಾದ ಕೂಡಲೆ ಪುರಾಣಗಳನ್ನು ರಚಿಸಿದರು ಎನ್ನುವ ವಿಷಯದಲ್ಲಿ ತಾಮ್ರಪರ್ಣೀಆಚಾರ್ಯರು ಯಾವ ಪ್ರಮಾಣವನ್ನೂ ಉದಾಹರಿಸುವದಿಲ್ಲ. ವೇದವಿಭಾಗದ ನಂತರ ಪುರಾಣ, ಬಳಿಕ ಭಾರತ, ನಂತರ ಭಾಗವತ ಎನ್ನುವದನ್ನು ಉಪಪಾದಿಸುವದಕ್ಕೆ ಅನುಸರಿಸಿದ ಕ್ರಮ ಈ ರೀತಿಯಾಗಿದೆ.

ತಾಮ್ರಪರ್ಣೀಟಿಪ್ಪಣಿಯ ಪ್ರಕಾರ ಬ್ರಹ್ಮಸೂತ್ರನಿರ್ಮಾಣ ಕೊನೆಯಲ್ಲಿ. ಆದಕ್ಕೂ ಮುಂಚೆ ದೇವಮೀಮಾಂಸಾ ರಚನೆ. ಇದಕ್ಕೆ ಅನುವ್ಯಾಖ್ಯಾನ-ಸುಧಾಗಳು ಆಧಾರವಾಗಿವೆ. ದೇವಮೀಮಾಂಸಾಕ್ಕಿಂತಲೂ ಮೊದಲು ವ್ಯುತ್ಕ್ರಮವಾಗಿ ಭಾಗವತ, ಭಾರತ, ಪುರಾಣಗಳ ರಚನೆ ಎಂದು ಹೇಳುತ್ತಾರೆ. ಇದರ ಉಪಪಾದನೆಯ ಕ್ರಮ ಈ ರೀತಿಯಾಗಿದೆ. ಭಾರತರಚನೆಯಾದ ಮೇಲೆ ಭಾಗವತದ ರಚನೆ ಎಂಬುದು ಪದ್ಮಪುರಾಣ ಹಾಗು ಭಾಗವತಗಳಿಂದ ನಿರವಕಾಶವಾಗಿ ಸಿದ್ಧವಾಗಿದೆ. ಇನ್ನು ಹದಿನೇಳು ಪುರಾಣಗಳು ಭಾರತಕ್ಕಿಂತಲೂ ಮೊದಲು ಎನ್ನುವುದು 'ಅಷ್ಟಾದಶಪುರಾಣಾನಿ ಕೃತ್ವಾ' ಎಂಬ ನಿರವಕಾಶಪ್ರಮಾಣದಿಂದ ಸಿದ್ಧವಾಗಿದೆ. ಹೀಗಾಗಿ ೧೭ಪುರಾಣಗಳು ಹಾಗು ಭಾಗವತ, ಭಾರತದ ಪೂರ್ವಾಪರಕಾಲಗಳಲ್ಲಿ ರಚನೆಯಾದದ್ದು ಎಂದು ನಿರ್ವಿವಾದವಾಗಿ ಹೇಳಬಹುದು.

ಇನ್ನು ಈ ಮೂರು ಗ್ರಂಥಗಳು ಬ್ರಹ್ಮಸೂತ್ರ-ದೇವಮೀಮಾಂಸಾಕ್ಕಿಂತಲೂ ಮೊದಲು ಎಂದು ಹೇಳಬೇಕಾದರೆ ಗ್ರಂಥತ್ರಯಗಳಲ್ಲಿ ಒಂದಾದ ಭಾರತವು ಬ್ರಹ್ಮಸೂತ್ರಕ್ಕಿಂತಲೂ ಮೊದಲು ಎಂದು ನಿರ್ಣಯವಾಗಬೇಕು.

ಭಾರತವು ಬ್ರಹ್ಮಸೂತ್ರಕ್ಕಿಂತಲು ಮೊದಲು ಎಂದಾದರೆ ಭಾರತದ ಅವ್ಯವಹಿತ ಪೂರ್ವಾಪರಕಾಲಗಳಲ್ಲಿ ರಚಿತವಾದ ೧೭ಪುರಾಣ ಹಾಗು ಭಾಗವತಗಳು ಬ್ರಹ್ಮಸೂತ್ರಕ್ಕಿಂತಲೂ ಮೊದಲು ರಚಿಸಲ್ಪಟ್ಟಿವೆ ಎಂದಾಗುತ್ತದೆ. ಭಾರತವು ಬ್ರಹ್ಮಸೂತ್ರದ ನಂತರದಲ್ಲಿ ಬಂದಿದೆ ಎಂದಾದರೆ ೧೭ಪುರಾಣಗಳು ಹಾಗು ಭಾಗವತ ಬ್ರಹ್ಮಸೂತ್ರಗಳ ನಂತರದಲ್ಲಿ ಎಂದು ಹೇಳಬೇಕು.

ಭಾರತವು ಬ್ರಹ್ಮಸೂತ್ರಗಳಿಗಿಂತಲು ಮೊದಲು ಎಂಬುದಕ್ಕೆ ಸುಮಧ್ವವಿಜಯವಚನಮಾತ್ರ ಪ್ರಮಾಣವಾಗಿ ಉದಾಹರಿಲಾಗಿದೆ. ಉದಾಹರಿಸಿದ ಸುಮಧ್ವವಿಜಯದ ವಚನವನ್ನೂ ತಾಮ್ರಪರ್ಣೀಟಿಪ್ಪಣಿಯಲ್ಲೇ ಉಲ್ಲೇಖಿಸಿದ ಕೇಚಿತ್ಕಾರರ ಅಭಿಪ್ರಾಯದಂತೆ ಬೇರೆ ರೀತಿಯಿಂದ ಅರ್ಥೈಸಬಹುದು. ಹೀಗಾಗಿ ಸುಮಧ್ವವಿಜಯದ ವಚನ ಸಾವಕಾಶವಾಗಿದೆ.

ತಾಮ್ರಪರ್ಣೀವ್ಯಾಖ್ಯಾನದಲ್ಲಿ ಉಲ್ಲೇಖಿಸಿದ ಕೇಚಿತ್ಕಾರರ ಪಕ್ಷವು ಈ ರೀತಿಯಾಗಿದೆ. *'ಬ್ರಹ್ಮಸೂತ್ರಾನಂತರ್ಯಮೇವ ಪುರಾಣಭಾರತಯೋಃ, ಮಧ್ವವಿಜಯವಚನಂ ತು' 'ಭಾರತಪಾರಿಜಾತ-ಮಧುಭೂತಾಮ್' ಇತಿ ಭಾರತಸ್ಯ ಪಾರಿಜಾತಸಾಮ್ಯೋಕ್ತೇಃ, ಸೂತ್ರಗಣಸ್ಯ ನ್ಯಾಯಾಮೃತತ್ವಸ್ಯ ಭಗವತ್ಪಾದೋಕ್ತೇಃ ಅಮೃತಸಾರೂಪ್ಯಲಾಭಾಯ ಶ್ಲೇಷರೂಪೇಣ ಸೂತ್ರಸ್ಯ ಭಾರತಾನಂತರ್ಯಮಾಹ । ನ ವಸ್ತುಗತ್ಯಾ ಇತ್ಯಾಹುಃ''*

ಕೇಚಿತ್ಕಾರರ ಅಭಿಪ್ರಾಯ ಇಷ್ಟು. ಶ್ರೀಮದಾಚಾರ್ಯರು ಗೀತಾಭಾಷ್ಯದಲ್ಲಿ ಗೀತೆಗೆ ಪಾರಿಜಾತ ಸಾಮ್ಯವನ್ನು ಹೇಳಿದ್ದಾರೆ. ನ್ಯಾಯವಿವರಣದಲ್ಲಿ 'ನ್ಯಾಯಾಮೃತಾರ್ಣವಮಿಮಂ ಅವಗಾಹ್ಯ ವಿಭಜ್ಯ ಚ' ಎಂದು ಬ್ರಹ್ಮಸೂತ್ರಗಳಿಗೆ ಅಮೃತತ್ವವನ್ನು ಹೇಳಿದ್ದಾರೆ. ಸಮುದ್ರಮಥನ ಕಾಲದಲ್ಲಿ ಪಾರಿಜಾತ ಮೊದಲು ಹುಟ್ಟಿದೆ. ಕಡೆಯಲ್ಲಿ ಹುಟ್ಟಿದ್ದು ಅಮೃತ. ಹಾಗಾಗಿ ಅದನ್ನು ಹೊಂದಿಸುವುದಕ್ಕೆ ಪಂಡಿತಾಚಾರ್ಯರು ಪಾರಿಜಾತಸ್ಥಾನೀಯವಾದ ಭಾರತರಚನೆಯ ನಂತರ ಕೊನೆಯಲ್ಲಿ ಅಮೃತಸ್ಥಾನೀಯವಾದ ಬ್ರಹ್ಮಸೂತ್ರಗಳ ರಚನೆ ಹೇಳಿದ್ದಾರೆ. ವಾಸ್ತವಿಕವಾಗಿ ಶ್ರೀಮದಾಚಾರ್ಯರು ಹೇಳಿದ ಹಾಗೆ ಬ್ರಹ್ಮಸೂತ್ರಗಳ ರಚನೆ ಮೊದಲು. ನಂತರ ಭಾರತದ ರಚನೆ ಎಂದು ತಿಳಿಯಬೇಕು.

ಈ ರೀತಿ ಕೇಚಿತ್ಕಾರರ ಅಭಿಪ್ರಾಯಕ್ಕನುಗುಣವಾಗಿ 'ಇತ ಏವ ಪುರಾಣಗೌರಗೌ' ಎಂಬ ವಚನವನ್ನು ಬೇರೆ ರೀತಿಯಿಂದ ಅರ್ಥೈಸಬಹುದು. ಆದ್ದರಿಂದ ಬ್ರಹ್ಮಸೂತ್ರಗಳಿಗಿಂತಲೂ ಮುಂಚೆಯೆ ಮಹಾಭಾರತ ರಚಿತವಾಯಿತು ಎಂದು ನಿಖರವಾಗಿ ಹೇಳಲು ಸಾಧ್ಯವಾಗುವದಿಲ್ಲ.

**ಬ್ರಹ್ಮಸೂತ್ರಗಳ ನಂತರ ಭಾರತ ರಚನೆ ಎಂಬ ಪಕ್ಷ**

ಬ್ರಹ್ಮಸೂತ್ರಗಳ ನಂತರದಲ್ಲಿ ಭಾರತರಚನೆ ಎನ್ನುವುದಕ್ಕೂ ಆಧಾರಗಳಿವೆ. ಮಹಾಭಾರತಾಂತರ್ಗತ ವಾದ ಗೀತೆಯಲ್ಲಿ 'ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ' ಎಂಬುದಾಗಿ ಬ್ರಹ್ಮಸೂತ್ರಗಳ ಉಲ್ಲೇಖ ಬಂದಿರುವದರಿಂದ ಬ್ರಹ್ಮಸೂತ್ರಗಳಾದಮೇಲೆ ಭಾರತ ಎಂದೂ ಹೇಳಬಹುದು.

**ಶ್ರೀನಿವಾಸತೀರ್ಥರು ಹಾಗು ಸುಮತೀಂದ್ರತೀರ್ಥರ ಅಭಿಪ್ರಾಯ**

ಪ್ರಮೇಯದೀಪಿಕಾವ್ಯಾಖ್ಯಾನದಲ್ಲಿ ಶ್ರೀನಿವಾಸತೀರ್ಥರೂ ಕೂಡ ಪುರಾಣರಚನೆ ಬ್ರಹ್ಮಸೂತ್ರಕ್ಕಿಂತಲೂ ಮೊದಲು ಎಂದೇ ಹೇಳುತ್ತಾರೆ. ಆದರೆ ಭಾರತನಿರ್ಮಾಣವು ಬ್ರಹ್ಮಸೂತ್ರಗಳ ನಂತರ ಎಂದು ಹೇಳುತ್ತಾರೆ. ಅವರ ವಾಕ್ಯಗಳನ್ನು ನೋಡೋಣ.

'ನನು 'ದ್ವೈಪಾಯನಃ ಸೋಽಥ ಜಗಾಮ ಮೇರುಂ ಚತುರ್ಮುಖಾದ್ಯೈರನುಗಮ್ಯಮಾನಃ' ಇತಿ ಮಹಾಭಾರತತಾತ್ಪರ್ಯನಿರ್ಣಯೇ ಮೇರುಗಮನಾನಂತರಂ ವೇದೋದ್ಧಾರಂ ಕೃತ್ವಾ, ಪುರಾಣಾದಿ ಸರ್ವಶಾಸ್ತ್ರಾಣಿ ವಿಧಾಯ, ಬ್ರಹ್ಮಸೂತ್ರಾಣಿ ಚ ಕೃತ್ವಾ ಪಶ್ಚಾತ್ 'ಚಕ್ರೇ ಮಹಾಭಾರತನಾಮಧೇಯಮ್' ಇತಿ ಭಾರತನಿರ್ಮಾಣೋಕ್ತೇಃ ....'

ಭಾವರತ್ನಕೋಶಕಾರರೂ ಪುರಾಣನಿರ್ಮಾಣದ ವಿಷಯದಲ್ಲಿ ಮೌನವಹಿಸಿದರೂ ಭಾರತನಿರ್ಮಾಣ ಬ್ರಹ್ಮಸೂತ್ರಗಳ ನಂತರವೇ ಎಂದು ಒಪ್ಪುತ್ತಾರೆ.

'...ಭಾರತತಾತ್ಪರ್ಯನಿರ್ಣಯೇ 'ದ್ವೈಪಾಯನಃ ಸೋಽಥ ಜಗಾಮ ಮೇರುಂ' ಇತ್ಯಾದಿನಾ ಮೇರುಗಮನಾಖಿಲವೇದೋದ್ಧಾರತದ್ದಾನಸರ್ವಶಾಸ್ತ್ರಕರಣಬ್ರಹ್ಮಸೂತ್ರರಚನತದುಪದೇಶಾದಿಕಮಭಿಧಾಯ ಅನಂತರಂ ''ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಂ ಚಕ್ರೇ ಮಹಾಭಾರತನಾಮಧೇಯಮ್'' ಇತಿ ಭಾರತನಿರ್ಮಾಣಾಭಿಧಾನಾದಿತ್ಯತಸ್ತಾತ್ಪರ್ಯಮಾಹವಿಜಾತೀಯೇತಿ ॥ ಯದ್ಯಪ್ಯಸ್ತಿ ವೇದೋದ್ಧಾರಾದಿ, ತಥಾಪಿ ತದ್ಭಾರತಾರ್ಥತತ್ವಜ್ಞಾನೋಪಯುಕ್ತಮೇವ । ವೇದಾದೇರ್ಭಾರತವ್ಯಾಖ್ಯೇಯತ್ವಾತ್ । ವ್ಯಾಖ್ಯೇಯಾನುಪಸ್ಥಿತೌ ವ್ಯಾಖ್ಯಾನಸ್ಯ ಪ್ರವೃತ್ತ್ಯಯೋಗಾತ್ ॥''

ಹೀಗೆ ತಾತ್ಪರ್ಯನಿರ್ಣಯದಲ್ಲಿ ಹೇಳಿದಂತೆ ಬ್ರಹ್ಮಸೂತ್ರಗಳ ರಚನೆಯ ನಂತರ ಮಹಾಭಾರತ ರಚನೆ ಎಂಬ ಕ್ರಮವನ್ನೇ ಶ್ರೀನಿವಾಸತೀರ್ಥರು, ಸುಮತೀಂದ್ರರು ಹಾಗೂ ತಾಮ್ರಪರ್ಣೀವ್ಯಾಖ್ಯಾನದಲ್ಲಿ ಉದಾಹರಿಸಿದ ಕೇಚಿತ್‌ಕಾರರು ಅಂಗೀಕರಿಸಿದ್ದಾರೆ.

**ಬ್ರಹ್ಮಸೂತ್ರಗಳು -**

ವೇದವ್ಯಾಸದೇವರು ಮಾಡಿದ ವೇದವಿಭಾಗ, ಪುರಾಣಭಾರತಭಾಗವತರಚನೆ ಇವುಗಳ ಸನ್ನಿವೇಶದ ಕುರಿತಾದ ಶ್ಲೋಕಗಳು ಭಾರತಪುರಾಣಗಳಲ್ಲಿ ಹೇರಳವಾಗಿ ಸಿಗುತ್ತವೆ. ಆದರೆ ಅನಂತನಿಗಮಾಗಮಗಳ ಅರ್ಥವನ್ನು ನಿರ್ಣಯಿಸುವಂತಹ, ಬ್ರಹ್ಮಾದಿದೇವತೆಗಳಿಗೂ ಜ್ಞಾನಧಾರೆಯನ್ನು ಹರಿಸುವ ಸೂತ್ರರಚನೆ ಮಾಡಿದ್ದನ್ನು ಉಲ್ಲೇಖಿಸುವ ಶ್ಲೋಕಗಳು ಪ್ರಾಯಃ ಇವತ್ತು ಮುದ್ರಿತವಾದ ಯಾವದೇ ಪುರಾಣಗಳಲ್ಲಾಗಲಿ, ಮಹಾಭಾರತದಲ್ಲಾಗಲಿ ನಮಗೆ ಉಪಲಬ್ಧವಾಗುವುದಿಲ್ಲ. ಕೇವಲ ಪದ್ಮಪುರಾಣದಲ್ಲಿಯ ಉತ್ತರಖಂಡದಲ್ಲಿ ಬರುವ ವಾಸುದೇವಸಹಸ್ರನಾಮದಲ್ಲಿ ಹಾಗೂ ಶಾಂಡಿಲ್ಯಸಂಹಿತೆಯಲ್ಲಿ ಬ್ರಹ್ಮಸೂತ್ರರಚನೆಯ ಕುರಿತಾಗಿ ಕೆಲವು ಮಾತುಗಳು ಸಿಗುತ್ತವೆ. ಆ ಮಾತುಗಳನ್ನು ನೋಡೋಣ.

'ಅ ಆ ಅಂ ಅಃ ಪುರಾಣರ್ಷಿಃ ವ್ಯಾಸಃ ಶಾಖಾಸಹಸ್ರಕೃತ್ ।
ಮಹಾಭಾರತನಿರ್ಮಾತಾ ಕವೀಂದ್ರೋ ಬಾದರಾಯಣಃ ॥

ಕೃಷ್ಣದ್ವೈಪಾಯನಃ ಸರ್ವಪುರುಷಾರ್ಥೈಕಬೋಧಕಃ ।
ವೇದಾಂತಕರ್ತಾ ಬ್ರಹ್ಮೈಕವ್ಯಂಜಕಃ ಪುರುವಂಶಕೃತ್ ॥'ಪಾದ್ಮ,ಉ.ಖಂ,71.275-276

'ವೇದವ್ಯಾಸಮಹಂ ವಂದೇ ವೇದವ್ಯಾಸಕರಂ ಹರಿಮ್ ।
ಪರಾಶರಸುತಂ ಸತ್ಯವತೀಪುತ್ರಂ ಮಹಾಮುನಿಮ್ ॥

ಪ್ರಾಚೀನಗರ್ಭಂ ಪ್ರವದಂತಿ ಯಂ ವೈ ಜ್ಞಾನಾವತಾರಂ ಪ್ರಥಮಂ ಮುರಾರೇಃ ।
ಆಚಾರ್ಯಸಿಂಹಾಸನಮಾಶ್ರಿತೋ ಯೋ ವೇದಾಂತಸೂತ್ರಾಣ್ಯವದಚ್ಚ ಮಂತ್ರಾನ್ ॥

ಅಪಾಂತರತಮಾ ಮುನಿರ್ನಿಗಮದೇಶಿಕಶ್ಚಾದಿಮಃ
ವದಂತಿ ಪರಮರ್ಷಯೋಽಪರವಿಧಿಂ ಷಷ್ಠಂ ವಿಧೇಃ ।
ಚತುರ್ಮುಖಮುಖೋದಿತಂ ನಿಗದಿತಂ ಚ ಯತ್ಪಂಚಮಂ
ಜಗದ್ಧಿತಕೃತೇ ನಿಜಹಿತಸ್ಯ ವೇದಂ ನುಮಃ ॥

ವ್ಯಾಸಾಂಭೋಧಿಜ್ಞಾನವಿಜ್ಞಾನಲೀನಂ ತಸ್ಮಿನ್ ಜಾತಂ ಭಾರತಾಂಭೋಜಪುಷ್ಪಮ್ ।
ಹಂಸಾ ಹಂಸಾ ಮೋದಿತಾ ಯಸ್ಯ ಮೋದಾತ್ ತ್ಯಕ್ತ್ವಾ ಸ್ವಾರಾಂ ಸಂಸೃತಿಂ ಯಾಂತಿ ಪಾರಮ್ ॥'

'ಮಾನಂ ಯಸ್ಯ ವಚಃ ಸುರಾಸುರಗಣೈಃ ಸದ್ಭಿರ್ನರೈರ್ಮನ್ಯತೇ
ಜ್ಞಾನಂ ಯೇನ ಚ ಭಣ್ಯತೇ ಭ್ರಮಹರಂ ಶಾಂತಿಪ್ರದಂ ಚಾಮೃತಮ್ ।
ಯದ್ವ್ಯಾಖ್ಯಾರ್ಥಚತುಷ್ಟಯಂ ತದೃಷಯಃ ಪ್ರಾಹುರ್ನೃಣಾಂ ತುಷ್ಟಯೇ
ಯಸ್ಮಿನ್ನಾಸ್ತಿ ನ ಚಾಸ್ಯ ತತ್ಕ್ವಚಿದಪಿ ವ್ಯಾಸಂ ತಮೇನಂ ಭಜೇ ॥

ಶಾಂಡಿಲ್ಯಸಂಹಿತಾ.ಭಕ್ತಿಖಂಡ.4ಅಂಶ.11ಅ.47-51 ।

ಬ್ರಹ್ಮಸೂತ್ರಗಳನ್ನು ರಚಿಸಿದ್ದು ವ್ಯಾಸರು ಎಂದು ಪ್ರಾಚೀನ ಎಲ್ಲ ದಾರ್ಶನಿಕರೂ ಒಪ್ಪಿದ ಮಾತು. ಆದರೆ ಆ ಪ್ರಸಂಗದ ಕುರಿತಾಗಿ ವಿಸ್ತೃತವಾದ ವಿವರಣೆಗಳು ಆಕರಗಳಲ್ಲಿ ವಿಫುಲವಾಗಿ ಉಪಲಬ್ಧವಾಗದೆ ಇರುವದು ಒಂದು ಅಚ್ಚರಿ. ಗ್ರಂಥಗಳ ವಿಕ್ಷೇಪಕ್ಕೆ ಇದೊಂದು ಒಳ್ಳೆಯ ದೃಷ್ಟಾಂತವಾಗುತ್ತದೆ.

ಆದ್ದರಿಂದ ವ್ಯಾಸರು ಯಾವ ಗ್ರಂಥದ ನಂತರದಲ್ಲಿ ಬ್ರಹ್ಮಸೂತ್ರಗಳನ್ನು ರಚಿಸಿದರು ಎಂದು ನಿಖರವಾಗಿ ನಿರ್ಣಯಿಸುವುದು ಕಷ್ಟ.

**ಕ್ರಮ ಹೇಳುವ ಉದ್ದಶ್ಯ ಇದೆಯೆ?**

ಹತ್ತನೆಯ ಅಧ್ಯಾಯ ವೇದವ್ಯಾಸಾವತಾರ, ಗ್ರಂಥನಿರ್ಮಾಣ, ದೇಶಸಂಚಾರ ಮುಂತಾದವುಗಳನ್ನು ಹೇಳುವದಕ್ಕೆ ಹೊರಟಿದೆ. ಆದರೆ ಗ್ರಂಥರಚನೆಯಲ್ಲಿ ಕ್ರಮ ಹೇಳುವುದರ ಉದ್ದೇಶ ಅದಕ್ಕಿಲ್ಲ ಎಂದು ತೋರುತ್ತದೆ. ತಾತ್ಪರ್ಯನಿರ್ಣಯದಲ್ಲಿ ಗ್ರಂಥರಚನೆಯನ್ನು ಹೇಳುವ ಪ್ರಸಂಗದಲ್ಲಿ ಆನಂತರ್ಯವನ್ನು ಸೂಚಿಸುವ ಅಥವಾ ಕ್ರಮವನ್ನು ಸೂಚಿಸುವ 'ಅಥ' 'ತತಃ' ಮುಂತಾದ ಯಾವ ಶಬ್ದಗಳೂ ಕಾಣುವದಿಲ್ಲ. ಮೊದಲು ವ್ಯಾಸರು ಗ್ರಂಥರಚನೆ ಮಾಡಿದ್ದನ್ನು ಮಾತ್ರ ಹೇಳುತ್ತಾ ಕೊನೆಯಲ್ಲಿ 'ಪುರಾಣನ್ಯಥ ಚಾಕರೋತ್' ಎಂಬಲ್ಲಿ ಮಾತ್ರ 'ಅಥ' ಎನ್ನುವ ಶಬ್ದ ಹೇಳಿದ್ದನ್ನು ಕಾಣುತ್ತೇವೆ. ಒಂದು ಪ್ರಸಂಗದಲ್ಲಿ ಹೇಳಿದ 'ಅಥ' ಶಬ್ದದಿಂದ ಸಮಗ್ರವಾದ ಗ್ರಂಥರಚನಾ ಕ್ರಮವನ್ನು ನಿರ್ಣಯಿಸುವುದು ಸಮಂಜಸವಾಗುವದಿಲ್ಲ. ಹಾಗೆ ಮಾಡುವದಕ್ಕೆ ಯಾವುದೇತರಹದ ಜ್ಞಾಪಕಗಳು ಕಂಡುಬರುವದಿಲ್ಲ.

ಆದ್ದರಿಂದ ಆಚಾರ್ಯರು ತಾತ್ಪರ್ಯನಿರ್ಣಯದಲ್ಲಿ ಮೊದಲು ದೇವತೆಗಳ ಅಜ್ಞಾನವನ್ನು ಪರಿಹರಿಸುವದಕ್ಕೆ ಪ್ರಯೋಜಕವಾದ ಗ್ರಂಥಗಳ ನಿರ್ಮಾಣವನ್ನು ಮಾತ್ರ ಹೇಳುತ್ತಾರೆ. ಆಮೇಲೆ ಅಲ್ಪಬುದ್ಧಿ ಇರುವ ಮನುಷ್ಯರ ಉದ್ಧಾರಕ್ಕಾಗಿ ಮಾಡಿದ ಗ್ರಂಥಗಳ ನಿರ್ಮಾಣವನ್ನು ಹೇಳುತ್ತಾರೆ. ಈ ತತ್ವ ಆ ಪ್ರಸಂಗಕ್ಕೆ ಸಂಬಂಧಿಸಿದ ತಾತ್ಪರ್ಯನಿರ್ಣಯದ ಪೂರ್ವಾಪರ ಸಂದರ್ಭಗಳನ್ನು ಗಮನಿಸಿದಾಗ ತಿಳಿದುಬರುತ್ತದೆ.

ಯಮುನೆಯ ದ್ವೀಪದಲ್ಲಿ ಅವತರಿಸಿದ ವ್ಯಾಸರು ಮೇರು ಪರ್ವತಕ್ಕೆ ಹೋದರು. ಅಲ್ಲಿ ಕಣ್ಮರೆಯಾಗಿ ಹೋದ ಅನಂತವೇದಗಳನ್ನು ಉದ್ಧರಿಸಿದರು. ಆಮೇಲೆ ಬ್ರಹ್ಮತರ್ಕ ಮೊದಲಾದ ಶಾಸ್ತ್ರಗಳನ್ನು ರಚನೆ ಮಾಡಿದರು. ಬಳಿಕ ಸಮಸ್ತ ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸಿದರು. ಆಮೇಲೆ ಮಹಾಭಾರತವನ್ನು ಬರೆದರು. ವ್ಯಾಸರ ಉಪದೇಶದಿಂದ ಬ್ರಹ್ಮದೇವರನ್ನು ಬಿಟ್ಟು ಉಳಿದ ರುದ್ರಾದಿದೇವತೆಗಳ ಮನಸ್ಸಿನಲ್ಲಿ ಅಡಗಿದ್ದ ಕಲಿ ಅವನಿಂದ ಅಭಿಮನ್ಯಮಾನವಾದ ಅಜ್ಞಾನಾದಿಗಳು ನಾಶವಾದವು. ಹೀಗೆ ಮೇರುಪರ್ವತದಲ್ಲಿಯೇ ವೇದೋದ್ಧಾರ ಮೊದಲ್ಗೊಂಡು ಮಹಾಭಾರತದ ವರೆಗಿನ ದೇವಾಧಿಕಾರಿಕವಾದ ಗ್ರಂಥಗಳ ರಚನೆ, ಅವುಗಳ ಉಪದೇಶ ಇವುಗಳು ಮಾಡಿದ್ದನ್ನು ಹೇಳುತ್ತಾರೆ.

ಇದಾದ ಬಳಿಕ ಕಲಿಕಾಲದಿಂದ ಮನುಷ್ಯೋತ್ತಮರ ಅಲ್ಪವಾದ ಪುಣ್ಯ, ಬುದ್ಧಿ, ಆಯುಷ್ಯ ಇವುಗಳನ್ನು ನೋಡಿ ವೇದಗಳನ್ನು ವಿಭಾಗಿಸಿ, ಭಾಗವತಪುರಾಣದ ರಚಿಸಿದ್ದನ್ನು ಹೇಳುತ್ತಾರೆ. ಆಮೇಲೆ ಕರ್ಮಮೀಮಾಂಸಾ, ದೇವಮೀಮಾಂಸಾಗಳ ನಿರ್ಮಾಣವನ್ನು ಹೇಳಿ ಉಳಿದ ಪುರಾಣಗಳ ಸಂಗ್ರಹವನ್ನು ಹೇಳುತ್ತಾರೆ.

ಆದ್ದರಿಂದ ತಾತ್ಪರ್ಯನಿರ್ಣಯ ವ್ಯಾಸರ ಗ್ರಂಥರಚನೆಯ ಕ್ರಮ ಹೇಳಲು ಹೊರಟಿದ್ದಲ್ಲ ಎಂದು ತೋರುತ್ತದೆ.

**ಕ್ರಮವನ್ನೂ ಹೇಳಬಹುದು**

ಅಥವಾ ಅನೇಕ ವ್ಯಾಖ್ಯಾನಕಾರರು ಕ್ರಮ ಹೇಳುವದಕ್ಕಾಗಿ ಇಲ್ಲಿಯ ವಚನಗಳನ್ನು ಉದಾಹರಿಸಿರುವದರಿಂದ ಆಚಾರ್ಯರಿಗೆ ಇಲ್ಲಿ ಕ್ರಮ ಹೇಳುವ ಉದ್ದೇಶ್ಯವಿದೆ ಎನ್ನುವದಾದರೆ ಮುಂದೆ ಹೇಳುವ ಹಾಗೆ ಕ್ರಮವನ್ನು ಹೊಂದಿಸಬಹುದು.

ತಾತ್ಪರ್ಯನಿರ್ಣಯದ ಹತ್ತನೆಯ ಅಧ್ಯಾಯ ಹಾಗು ಅದಕ್ಕೆ ಸಂಬಂಧಿಸಿದ ಟಿಪ್ಪಣಿಗಳಲ್ಲಿ ಮತ್ತು ಅನುವ್ಯಾಖ್ಯಾನವನ್ನು ನೋಡಿದಾಗ ವ್ಯಾಸರು ಬರೆದ ಗ್ರಂಥಗಳಲ್ಲಿ ಸಂಭಾವಿತವಾದ ಒಂದು ಕ್ರಮವನ್ನು ತಿಳಿಯಬಹುದು.

ತಾಮ್ರಪರ್ಣೀಆಚಾರ್ಯರು ಹೇಳುವಂತೆ ತಾತ್ಪರ್ಯನಿರ್ಣಯದಲ್ಲಿ ದೇವಮೀಮಾಂಸಾದ ನಿರ್ಮಾಣವನ್ನು ಬ್ರಹ್ಮಸೂತ್ರಾದಿಗಳ ನಂತರದಲ್ಲಿ ಹೇಳಿದ್ದರೂ ನಿರವಕಾಶವಾದ ಅನುವ್ಯಾಖ್ಯಾನ ವಚನಕ್ಕಗನುಗುಣವಾಗಿ ದೇವಮೀಮಾಂಸಾ ಬ್ರಹ್ಮಸೂತ್ರಕ್ಕಿಂತಲೂ ಮೊದಲೇ ರಚಿತವಾಗಿದೆ ಎಂದು ಹೇಳಬೇಕು.

ಇದರ ಜೊತೆಯಲ್ಲಿ ಬ್ರಹ್ಮತರ್ಕವೂ ಬ್ರಹ್ಮಸೂತ್ರಕ್ಕಿಂತಲೂ ಮೊದಲೇ ರಚಿತವಾಯಿತು ಎಂದು ಹೇಳಬೇಕು. ತಾಮ್ರಪರ್ಣೀಟಿಪ್ಪಣಿಯಲ್ಲಿ ಬ್ರಹ್ಮತರ್ಕ ಯಾವಾಗ ರಚಿತವಾಯಿತು ಎಂಬ ಮಾತಿನ ಉಲ್ಲೇಖ ಕಂಡುಬರುವದಿಲ್ಲ. ಆದರೆ ಅನುವ್ಯಾಖ್ಯಾನ-ಸುಧಾಗಳಲ್ಲಿ ಬ್ರಹ್ಮತರ್ಕವೂ ಬ್ರಹ್ಮಸೂತ್ರಕ್ಕಿಂತಲೂ ಮುಂಚೆ ರಚಿತವಾಯಿತು ಎಂದು ಹೇಳಿದ್ದಾರೆ. ಅನುವ್ಯಾಖ್ಯಾನ-

ಏತತ್ಸರ್ವಂ ತರ್ಕಶಾಸ್ತ್ರೇ ಬ್ರಹ್ಮತರ್ಕೇ ಹಿ ವಿಸ್ತರಾತ್ ।
ಉಕ್ತಂ ವಿದ್ಯಾಪೃಥಕ್ತ್ವಾತ್ತು ಸಂಕ್ಷೇಪೇಣಾತ್ರ ಸೂಚಿತಮ್ ॥

ಸುಧಾ- ಯಸ್ಮಾದೇತತ್ಸರ್ವಂ ಪ್ರಮೇಯಂ ಬ್ರಹ್ಮತರ್ಕಾಭಿಧೇಯತರ್ಕಶಾಸ್ತ್ರೇ ವಿಸ್ತರಾದುಕ್ತಮ್ । ತಸ್ಮಾದತ್ರ ಮೀಮಾಂಸೋಪಕ್ರಮೇ ಅತ ಇತಿ ಸಂಕ್ಷೇಪೇಣ ಸೂಚಿತಮಿತ್ಯನೇನ ಶಂಕಾದ್ವಯಮಪಿ ಪರಾಸ್ತಮ್ ।

ಇನ್ನು 'ಪುರಾಣ-ಭಾರತ-ಭಾಗವತ'ಗಳು ಬ್ರಹ್ಮಸೂತ್ರಕ್ಕಿಂತಲೂ ಮೊದಲು ರಚಿತವಾಗಿವೆ ಎನ್ನುವದಕ್ಕೆ ತಾಮ್ರಪರ್ಣೀಆಚಾರ್ಯರು ನೀಡಿದ ಪ್ರಮಾಣವು ಸಾವಕಾಶ (ಬೇರೇರೀತಿಯಿಂದ ಅರ್ಥೈಸಬಹುದು) ಎಂದು ಹಿಂದೆ ತಿಳಿದಿದ್ದೇವೆ. ಆದ್ದರಿಂದ ಶ್ರೀನಿವಾಸತೀರ್ಥರು ಹಾಗು ಭಾವರತ್ನಕೋಶಕಾರರು ಹೇಳುವಂತೆ ಭಾರತ-ಭಾಗವತಗಳ ರಚನೆ ಬ್ರಹ್ಮಸೂತ್ರದ ನಂತರದಲ್ಲಿ ಎಂದು ಹೇಳಲು ಯಾವ ಅನುಪಪತ್ತಿಗಳೂ ಇಲ್ಲ.

ಇದಲ್ಲದೆ ಪುರಾಣಗಳ ರಚನೆಯನ್ನು ತಾತ್ಪರ್ಯನಿರ್ಣಯದಲ್ಲಿ ಕೊನೆಗೆ ಹೇಳಿದ್ದರೂ ಮಹಾಭಾರತದ ನಿರವಕಾಶವಾದ ವಚನ ಹಾಗು ನರಹರಿತೀರ್ಥರ ಗೀತಾಭಾಷ್ಯಟೀಕಾ ಇವುಗಳಿಗನುಗುಣವಾಗಿ ಭಾರತಕ್ಕಿಂತಲೂ ಮೊದಲು ಎಂದು ಹೇಳಬೇಕು.

ಈ ರೀತಿ ಯಾವ ಪ್ರಸಂಗದಲ್ಲಿ ತಾತ್ಪರ್ಯನಿರ್ಣಯದಲ್ಲಿ ಹೇಳಿದ ಕ್ರಮಕ್ಕೆ ನಿರವಕಾಶವಾದ ಪ್ರಮಾಣವಚನಗಳ ವಿರೋಧ ಇದೆ ಅಲ್ಲಿ ನಿರವಕಾಶವಾದ ವಚನಕ್ಕೆ ಅನುಗುಣವಾದ ಕ್ರಮವನ್ನು ಅನುಸರಿಸಬೇಕು. ಯಾವ ಪ್ರಸಂಗದಲ್ಲಿ ನಿರವಕಾಶವಾದ ವಚನಗಳ ವಿರೋಧವಿಲ್ಲ ಅಲ್ಲಿ ತಾತ್ಪರ್ಯನಿರ್ಣಯದಲ್ಲಿ ಹೇಳುವ ಗ್ರಂಥರಚನಾಕ್ರಮವನ್ನೇ ಯಥಾಸ್ಥಿತವಾಗಿ ಅನುಸರಿಸಬೇಕು.

**ವೇದವ್ಯಾಸರ ಗ್ರಂಥರಚನೆಯ ಕ್ರಮ**

| ತಾತ್ಪರ್ಯನಿರ್ಣಯ | ತಾಮ್ರಪರ್ಣೀಟಿಪ್ಪಣೀ | ಹೇಳಬಹುದಾದ ಕ್ರಮ |
|---|---|---|
| 1. ವೇದೋದ್ಧಾರ | 1. ವೇದೋದ್ಧಾರ | 1. ವೇದೋದ್ಧಾರ |
| 2. ಸರ್ವಶಾಸ್ತ್ರ | 2. ವೇದವಿಭಾಗ | 2. ವೇದವಿಭಾಗ |
| 3. ಬ್ರಹ್ಮಸೂತ್ರ | 3. ಪುರಾಣ | 3. ಬ್ರಹ್ಮತರ್ಕ |
| 4. ಮಹಾಭಾರತ | 4. ಮಹಾಭಾರತ | 4. ದೇವಮೀಮಾಂಸಾ |
| 5. ವೇದವಿಭಾಗ | 5. ಭಾಗವತ | 5. ಬ್ರಹ್ಮಸೂತ್ರ |
| 6. ಭಾಗವತ | 6. ದೇವಮೀಮಾಂಸಾ | 6. ಪುರಾಣ |
| 7. ದೇವಮೀಮಾಂಸಾ | 7. ಬ್ರಹ್ಮಸೂತ್ರ | 7. ಮಹಾಭಾರತ |
| 8. ಪುರಾಣಸಂಗ್ರಹ | | 8. ಶ್ರೀಮದ್ಭಾಗವತ |

ಈ ರೀತಿ ವ್ಯಾಸರ ಗ್ರಂಥರಚನೆಯ ಕ್ರಮದ ಬಗ್ಗೆ ಅನೇಕ ವಿಷಯಗಳನ್ನು ತಿಳಿದಿದ್ದಾಯಿತು. ಇನ್ನೂ ತಿಳಿಯಬೇಕಾದ, ನಿರ್ಣಯಮಾಡಿಕೊಳ್ಳಬೇಕಾದ ವಿಷಯಗಳು ನೂರಾರು. ಮಹಾಜ್ಞಾನಿಗಳಾದ ಎಲ್ಲ ವ್ಯಾಖ್ಯಾನಕಾರರ ವಾಙ್ಮಯಸೇವೆ ಮಾಡಿ, ಪಾಪಗಳನ್ನೆಲ್ಲ ಸವೇಸಿಕೊಂಡು, ಮತ್ತೆ ಮತ್ತೆ ಗ್ರಂಥಗಳ ಅಧ್ಯಯನ ಮಾಡಿ, ಅವರ ಅನುಗ್ರಹದಿಂದ ಶುದ್ಧವಾದ ಜ್ಞಾನವನ್ನು ಪಡೆಯುವ ಪ್ರಯತ್ನವನ್ನು ಮಾಡೋಣ.

**ರಾಹು ಕೇತುಗಳು ಯಾರು?**

ರಾಹುವು ಅಮೃತಪಾನಕ್ಕಾಗಿ ಸಾವಿರಜನ್ಮ ತಪಸ್ಸು ಮಾಡಿ ಬ್ರಹ್ಮನಿಂದ ವರ ಪಡೆದ. ಅದಕ್ಕಾಗಿ ಭಗವಂತನು ರಾಹುವಿನ ಕೈಯಲ್ಲಿ ಅಮೃತಬಿಂದು ಹಾಕಿ ಅವನ ಶಿರಸ್ಸನ್ನು ಕತ್ತರಿಸಿದ. ಹಾಗೆ ಕತ್ತರಿಸಿದ ರಾಹುವಿನ ಶಿರಸ್ಸು ಶ್ರೀಹರಿಯ ವರದಿಂದ ನವಗ್ರಹಗಳಲ್ಲಿ ಒಂದು ಗ್ರಹವಾಯಿತು.

**ಈ ವಿಷಯದಲ್ಲಿ ಅನೇಕ ಪ್ರಶ್ನೆಗಳು ಬರುತ್ತವೆ -**

೧. ಶ್ರೀಹರಿಯು ಚಕ್ರದಿಂದ ರಾಹುವಿನ ದೇಹವನ್ನು ಕತ್ತರಿಸಿದಾಗ ರಾಹು ಮೃತನಾದನೇ? ಇಲ್ಲವೇ?

೨. ರಾಹುವು ಅಮೃತಪಾನ ಮಾಡಿದನೇ? ಇಲ್ಲವೇ?

೩. ರಾಹುವಿನ ದೇಹದ ಯಾವ ಅವಯವಕ್ಕೆ ಅಮೃತಸ್ಪರ್ಶವಾಯಿತು?

೪. ರಾಹುಗ್ರಹ ಯಾವುದು? ರಾಹುವಿನಿಂದ ಕೂಡಿದ ತಲೆಯೊ? ದೇವತೆಗಳಿಂದ ಕೂಡಿದ ತಲೆಯೊ?

೫. ರಾಹುವಿನ ಶಿರಸ್ಸು ಹಾಗೂ ಕಬಂಧಗಳಲ್ಲಿ ಯಾವುದು ರಾಹು ಗ್ರಹ? ಯಾವುದು ಕೇತು ಗ್ರಹ?

೬. 'ಕೇತುಶತಮ್' ಇವರು ದೇವತೆಗಳೇ ಅಥವಾ ಅಸುರರೇ?

ಮೇಲೆ ಮಾಡಿದ ಪ್ರಶ್ನೆಗಳಿಗೆ ಉತ್ತರರೂಪವಾಗಿ ಅನೇಕ ಟಿಪ್ಪಣಿಕಾರರ ಅಭಿಪ್ರಾಯಗಳನ್ನು ಯಾಥಾವಸ್ಥಿತವಾಗಿ ನಮೂದಿಸಲಾಗಿದೆ. ಈ ಪ್ರಸಂಗಕ್ಕೆ ಸಂಬಂಧಿಸಿದ ತಾತ್ಪರ್ಯನಿರ್ಣಯದ ವ್ಯಾಖ್ಯಾನಗಳಲ್ಲಿ ಈ ಸಮಸ್ಯೆಗಳ ಕುರಿತಾಗಿ ಚಿಂತನಗಳು ನಡೆದಿವೆ. ಆದರೆ ಮೇಲಿನ ಎಲ್ಲ ಸಮಸ್ಯೆಗಳಿಗೆ ಪೂರ್ಣಮಟ್ಟದ ಪರಿಹಾರ ನಮಗೆ ಸಿಗುವದಿಲ್ಲ. ಆ ಸಮಸ್ಯೆಗಳ ಪರಿಹಾರಕ್ಕೆ ಇನ್ನೂ ಹೆಚ್ಚಿನ ಸಂಶೋಧನೆ ಆಗಬೇಕು ಎಂಬುದು ನನ್ನ ಅನಸಿಕೆ.

**೧. ರಾಹುವು ಮೃತನಾದನೇ? ಇಲ್ಲವೇ?**

**ವಾದಿರಾಜೀಯಟಿಪ್ಪಣೀ**

**ಶಿರಸ್ತು ತಸ್ಯ ಗ್ರಹತಾಮವಾಪ ಇತ್ಯತ್ರ ಚಮತ್ಕಾರೇಣ ಛಿದ್ಯಮಾನೇ ಶಿರಸಿ ರಾಹುರ್ಮೃತಃ । ತಸ್ಯ ಸುಧಾಪಾನಂ ನಾಸೀದೇವ । ಶಿರಸ್ತು ಹರೇರ್ಹಸ್ತಲಾಘವಾತ್ ತತ್ರೈವ ಲಗ್ನಮ್ । ನ ತು ತದೈವ ಪತಿತಂ । ಅಥ ತಸ್ಯಾಧರೋಷ್ಠೋಪರಿ ನಿಕ್ಷಿಪ್ತಂ ಕರಸ್ಥಮಮೃತಂ ತು ಛಿನ್ನಶಿರಃಪಾತಾತ್ಪೂರ್ವಂ ಆಸ್ಯವಿವರಂ ಪ್ರವಿಶ್ಯ ಗಲವಿವರದ್ವಾರೇಣ ಕಬಂಧಂ ಪ್ರಾವಿಶತ್ । ಶಿರೋಽಪಿ ಪ್ರಾವಿಶತ್ । ಅತಃ ಸುಧಾಸತ್ವಾತ್ ಶಿರೋಽಪಿ ಚಿರಕಾಲಸ್ಥಾಯಿ । ಕಬಂಧೋಽಪಿ ಚಿರಕಾಲಸ್ಥಾಯೀ । ತಯೋರ್ಮಧ್ಯೇ ಶಿರಸಿ 'ರಾಹುರ್ಜ್ಯೇಷ್ಠಂ ಕೇತು- ಶತಮ್'(ಭಾಗ.6.6.36) ಇತಿ ವಚನಾತ್' ರಾಹೋರಪೀಷತ್ಸನ್ನಿಧಾನಂ ದೇವಾನಾಂ ಶತಸ್ಯ ಚ ಸನ್ನಿಧಾನಮ್ । ತತ್ರಾಪಿ ಶಿರೋಽಭಿಮಾನಿತ್ವಾತ್ ರಾಹೋರಂಶಸ್ಯ ಜ್ಯೇಷ್ಠತಾ ಕೇತೂನಾಂ ಕನಿಷ್ಠತಾ । ಏವಂ ಗ್ರಹದ್ವಯಸ್ಯಾಪಿ ಏಕಂ ಶಿರ ಏವ ಅಧಿಷ್ಠಾನಮ್ । ಅತ ಏವ 'ಕರೇ ಪ್ರಾಸ್ಯ ಶಿರೋ ಜಹಾರ' ಇತ್ಯುಕ್ತಮ್ । ರಾಹುನಾಮ್ನಾ ಯಾಜ್ಞಿಕೈರ್ದೀಯಮಾನಂ ಹವಿಃ ದೇವಾ ಏವ ಗೃಹ್ಣಂತಿ । ಯಜ್ಞಾಹುತ್ಯಾಂ ದೈತ್ಯಾನಾಮನಧಿಕಾರಾತ್ । ಪರ್ವಣಿ ಪರ್ವಣಿ ಸೂಚಕಯೋಶ್ಚಂದ್ರಸೂರ್ಯಯೋಃ ದ್ವೇಷಮಾತ್ರಾಯ ರಾಹುಃ । ಅವೈಷ್ಣವದತ್ತಾಹುತ್ಯೈವ ತಸ್ಯ ಜೀವನಮಿತಿ ವಿವೇಕಃ॥**

ವಾದಿರಾಜೀಯಟಿಪ್ಪಣಿಯ ಅಭಿಪ್ರಾಯ- ಶ್ರೀಹರಿಯು ತನ್ನ ಹಸ್ತಚಮತ್ಕಾರದಿಂದ ರಾಹುವಿನ ರುಂಡವನ್ನು ಕತ್ತರಿಸಿದಾಗ ರಾಹು ಮೃತನಾದ. ಅವನು ಅಮೃತಪಾನವನ್ನು ಮಾಡಲೇ ಇಲ್ಲ.

ಹರಿಯು ರಾಹುವಿನ ಶಿರಸ್ಸನ್ನು ಕತ್ತರಿಸಿದಾಗ ರುಂಡ ಕೆಳಗೆ ಬೀಳಲಿಲ್ಲ. ಮುಂಡದ ಮೇಲೆಯೇ ಇತ್ತು. ಇದು ಹರಿಯ ಹಸ್ತದ ಚಮತ್ಕಾರ. ಬಳಿಕ ರಾಹುವಿನ ಕೈಯಿಂದ ತುಟಿಗೆ ತಾಕಿದ ಅಮೃತವು ರುಂಡಬೀಳುವುದಕ್ಕೆ ಮೊದಲು ರುಂಡದಲ್ಲಿಯೂ ಹರಡಿತು, ಮುಂಡದಲ್ಲಿಯೂ ಹರಡಿತು. ಆದ್ದರಿಂದ ರಾಹುವಿನ ರುಂಡವೂ ಚಿರಕಾಲಸ್ಥಾಯಿ, ಮುಂಡವೂ ಚಿರಕಾಲಸ್ಥಾಯಿಯಾಯಿತು.

ಸ್ಥಿರವಾಗಿ ಉಳಿದ ರುಂಡದಲ್ಲಿ ಅರ್ಥಾತ್ ಶಿರಸ್ಸಿನಲ್ಲಿ ನೂರುಮಂದಿ ದೇವತೆಗಳ ಸನ್ನಿಧಾನ ಹಾಗೂ ರಾಹುವಿನ ಸ್ವಲ್ಪ ಸನ್ನಿಧಾನವೂ ಇದೆ. ಭಾಗವತ ಷಷ್ಠಸ್ಕಂಧದ (೬.೩೬) 'ರಾಹುರ್ಜ್ಯೇಷ್ಠಂ ಕೇತುಶತಮ್' ಎಂದು ಹೇಳಿದಂತೆ ಎಲ್ಲರಿಗಿಂತ ಹಿರಿಯನಾದ ರಾಹುವು, ನೂರುಜನ ಕೇತುಗಳು ಅನುಜರು ಈ ಶಿರಸ್ಸಿನಲ್ಲಿ ಸನ್ನಿಹಿತರಾಗಿದ್ದಾರೆ. ರಾಹುವಿನ ಶಿರಸ್ಸಿಗೆ ರಾಹು ಮುಖ್ಯಾಭಿಮಾನಿಯಾದ್ದರಿಂದ ಅವನ ಅಂಶವನ್ನು ಜ್ಯೇಷ್ಠ ಎನ್ನಲಾಗಿದೆ. ಕೇತುದೇವತೆಗಳು ಕನಿಷ್ಠರೆಂದು ಕರೆಯಲಾಗಿದೆ. ಹೀಗೆ ರಾಹು ಕೇತು ಎನ್ನುವ ಎರಡು

ಗ್ರಹಗಳಿಗೂ ರಾಹುವಿನ ಶಿರಸ್ಸೇ ಅಧಿಷ್ಠಾನವಾಗಿದೆ. ಆದ್ದರಿಂದ 'ಕರೇ ಪ್ರಾಸ್ಯ ಶಿರೋ ಜಹಾರ' ಎನ್ನುತ್ತಾರೆ ಶ್ರೀಮದಾಚಾರ್ಯರು.

ರಾಹುನಾಮದಿಂದ ಯಾಜ್ಞಿಕರು ನೀಡುವ ಹವಿಸ್ಸನ್ನು ಕೇತುದೇವತೆಗಳೇ ಸ್ವೀಕರಿಸುತ್ತಾರೆ. ರಾಹುದೈತ್ಯನಲ್ಲ. ಯಾಗಾಹುತಿ ಸ್ವೀಕರಿಸಲು ದೈತ್ಯರಿಗೆ ಅಧಿಕಾರವಿಲ್ಲ. ಅವನು ಶಿರಸ್ಸಿನಲ್ಲಿ ಸನ್ನಿಹಿತನಾಗಿರುವುದು ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಚಂದ್ರಸೂರ್ಯರನ್ನು ನುಂಗುತ್ತ ದ್ವೇಷ ಸಾಧಿಸುವದಕ್ಕಾಗಿ. ಅವೈಷ್ಣವರು ನೀಡುವ ಆಹುತಿಯಿಂದಲೇ ಅವನ ಜೀವನ.

ವಾದಿರಾಜರು ತಮ್ಮ ಟಿಪ್ಪಣಿಯಲ್ಲಿ ರಾಹುವಿನ ಕುರಿತಾಗಿ ಇಷ್ಟು ಪರಿಚಯವನ್ನು ನೀಡಿದ್ದಾರೆ. ಇದರಲ್ಲಿ ರಾಹುವು ಮೃತನಾದನೇ ಇಲ್ಲವೇ? ಎಂಬ ಪ್ರಶ್ನೆಗೆ 'ರಾಹು ಮೃತನಾದ' ಎಂದು ವಾದಿರಾಜರ ಅಭಿಪ್ರಾಯ. ಆದರೆ ರಾಹುವು ಮೃತನಾಗಲಿಲ್ಲ ಎಂದು ಪುರಾಣಗಳು ಹೇಳುತ್ತವೆ.

ಚಕ್ರೇಣ ಪಾತಿತಂ ವತ್ಸ ಸಭುಜಂ ಮಸ್ತಕಂ ಮಮ ।
ಅಮೃತಪ್ರಾಶನಾತ್ ಪ್ರಾಣೈರವಿಯುಕ್ತೋಽಸ್ಮಿ ದಾನವ ॥

ನ ಮೇ ಕಂಠಾದಧೋಭಾಗಮಾಗತಂ ಮಮ ಚಕ್ರಿಣಾ ।
ಶಿರಶ್ಛಿನ್ನಂ ಮಹಾರಾಜ ತತ್ರ ಪ್ರಾಣಾಸ್ತತಃ ಸ್ಥಿತಾಃ ॥

ಶಿರಸಶ್ಛೇದನಾದ್ದೀನಂ ಮಾಂ ದೃಷ್ಟ್ವಾ ಮಧುಸೂದನಃ ।
ಜಾತಾನುಕಂಪೋ ಭಗವಾನಿದಂ ವಚನಮಬ್ರವೀತ್ ॥

ಪೀತಾಮೃತಸ್ಯ ದೈತ್ಯಸ್ಯ ಮರಣಂ ನಾಸ್ತಿ ಕರ್ಹಿಚಿತ್ ।
ಮಮ ಹಸ್ತವಿನಷ್ಟಾನಾಂ ಗತಿರ್ಭವತಿ ಶೋಭನಾ ॥ವಿಷ್ಣುಧರ್ಮೋತ್ತರೇ.1ಖಂ.42.35-38 ॥

ಮೇಲೆ ಉದಾಹರಿಸಿದ ವಿಷ್ಣುಧರ್ಮೋತ್ತರದ ವಚನದಲ್ಲಿ ವಿಚಿತ್ರವಾದ ಅನೇಕ ಸಂಗತಿಗಳು ಇವೆ. 'ಭುಜದಿಂದ ಸಹಿತವಾದ ರಾಹುವಿನ ತಲೆಯನ್ನು ಕತ್ತರಿಸಿದ' ಎಂಬ ಮಾತು, 'ರಾಹುವು ಅಮೃತಪ್ರಾಶನಮಾಡಿದ್ದರಿಂದ ಮರಣ ಹೊಂದಲಿಲ್ಲ' ಎಂಬ ವಚನ. 'ಅಮೃತವು ರಾಹುವಿನ ಮುಖದಲ್ಲಿ ಸೇರಿದ್ದರೂ ಕಂಠಕ್ಕಿಂತಲೂ ತೆಳಗೆ ಇಳಿಯಲಿಲ್ಲ' ಎಂದು ಇನ್ನೊಂದು ಮಾತು. ಪುರಾಣದ ಈ ಎಲ್ಲ ಮಾತುಗಳು ಅನೇಕ ಟಿಪ್ಪಣಿಕಾರರ ಅಭಿಪ್ರಾಯಗಳಿಗೆ ವಿರುದ್ಧವಾಗಿ ತೋರುತ್ತವೆ.

ವಿಷ್ಣುಧರ್ಮೋತ್ತರದಲ್ಲಿಯೂ ರಾಹುವು ಮೃತನಾಗಲಿಲ್ಲ ಎಂದು ಹೇಳಿದ್ದಾರೆ. ಇದೂ ವಾದಿರಾಜೀಯಟಿಪ್ಪಣಿಗೆ ವಿರೋಧಿಯಾದ ಮಾತು.

ಮುಹೂರ್ತಚಿಂತಾಮಣಿಯ ಪೀಯೂಷಧಾರಾ ಎಂಬ ವ್ಯಾಖ್ಯಾನದಲ್ಲಿಯೂ ರಾಹುವು ಮೃತನಾಗಲಿಲ್ಲ ಎನ್ನುವುದಕ್ಕೆ ಪುರಾಣವಚನವನ್ನು ಉದಾಹರಿಸುತ್ತಾರೆ.

ನಾರದೋಽಪಿ-

ಅಮೃತಾಸ್ವಾದನಾದ್ರಾಹುಃ ಶಿರಶ್ಛಿನ್ನೋಽಪಿ ಸೋಽಮೃತಃ ।
ವಿಷ್ಣುನಾ ತೇನ ಚಕ್ರೇಣ ತಥಾಪಿ ಗ್ರಹತಾಂ ಗತಃ ॥'' ಇತಿ ॥

**ವಿರೋಧಪರಿಹಾರ**

'ಶಿರಸ್ಸು ಕತ್ತರಿಸಿದಾಗ ರಾಹುವು ಮೃತನಾದ' ಎಂದು ಹೇಳುವ ವಾದಿರಾಜರಿಗೆ 'ರಾಹುವು ನಿಜವಾಗಿ ಮೃತನಾಗಲಿಲ್ಲ ಮೃತಪ್ರಾಯನಾದ' ಎಂದೇ ಅಭಿಪ್ರಾಯವಿದೆ ಎಂದು ಹೇಳಬೇಕು. ಅದಕ್ಕಾಗಿಯೇ ವಾದಿರಾಜರು ಮುಂದೆ 'ರಾಹೋರೀಷತ್ಸನ್ನಿಧಾನಮ್' 'ಶಿರಸ್ಸಿನಲ್ಲಿ ರಾಹುವಿನ ಅಲ್ಪ ಸನ್ನಿಧಾನ' ಇದೆ ಎಂದು ಹೇಳುತ್ತಾರೆ. ವಾದಿರಾಜರಿಗೆ 'ರಾಹುವು ನಿಜವಾಗಿ ಮೃತನಾದ' ಎಂಬ ಅಭಿಪ್ರಾಯ ಇದ್ದಿದ್ದರೆ ಶಿರಸ್ಸಿನಲ್ಲಿ ರಾಹುವಿನ ಸನ್ನಿಧಾನ ಇರುವುದಾಗಿ ಹೇಳುತ್ತಿರಲಿಲ್ಲ. 'ದೇಹಬಿಟ್ಟು ಹೋಗುವುದೇ' ಶಾಸ್ತ್ರದಲ್ಲಿ ಮರಣ ಎಂದು ಹೇಳಿದ್ದಾರೆ. ಆದ್ದರಿಂದ ರಾಹು ಮೃತನಾಗಲಿಲ್ಲ ಎಂದೇ ವಾದಿರಾಜರ ಅಭಿಪ್ರಾಯ ಎಂದು ತಿಳಿದುಬರುತ್ತದೆ.

ಅಥವಾ, ಶ್ರೀಮದಾಚಾರ್ಯರು 'ಸುಧಾಂ ಪ್ರಾಸ್ಯ ಶಿರೋ ಜಹಾರ' ಎಂದು ಹೇಳಿದ್ದರಿಂದ ರಾಹು ಮೃತನಾದ ಎಂದೇ ಹೇಳಬೇಕು. 'ಶಿರೋ ಜಹಾರ' ಎಂಬ ಮಾತಿಗನುಗುಣವಾಗಿಯೇ ವಾದಿರಾಜರೂ ರಾಹು ಮೃತನಾದ ಎಂದು ಹೇಳಿದ್ದಾರೆ. ಮರಣ ಹೊಂದಿದ ರಾಹು ಭಗವಂತನ ದಯೆಯಿಂದ ಮತ್ತೆ ಶಿರಸ್ಸಿನಲ್ಲಿ ಸೇರಿಕೊಂಡನು. ಆದ್ದರಿಂದಲೇ ರಾಹುವಿನ ಅಲ್ಪವಾದ ಸನ್ನಿಧಾನ ಶಿರಸ್ಸಿನಲ್ಲಿ ಇದೆ ಎಂದು ಹೇಳುತ್ತಾರೆ. 'ಪೂರ್ವವೈರಮನುಸ್ಮರನ್' 'ಅಭಿಧಾವತಿ ವೈರಧೀಃ' ಎಂಬ ಮಾತುಗಳಿಗೆ 'ಜನ್ಮಾಂತರದಲ್ಲಿ ಮಾಡಿದ ವೈರವನ್ನು ಸ್ಮರಿಸಿ ಚಂದ್ರಸೂರ್ಯರನ್ನು ನುಂಗಲು ಉದ್ಯುಕ್ತನಾಗುತ್ತಾನೆ' ಎಂದು ಅರ್ಥೈಸಬಹುದು. ಆದ್ದರಿಂದ ಆ ಮಾತುಗಳ ವಿರೋಧವೂ ಬರುವದಿಲ್ಲ. ಇನ್ನು 'ರಾಹು ಮೃತನಾಗಿಲ್ಲ' ಎಂದು ಹೇಳುವ ಅನೇಕಪುರಾಣವಚನಗಳಿಗೆ ನಿರ್ಣಾಯಕವಾದ ಆಚಾರ್ಯರ 'ಶಿರೋ ಜಹಾರ' ಎಂಬ ಮಾತಿಗೆ ಅನುಗುಣವಾಗಿ ಅರ್ಥವನ್ನು ಹೇಳಬೇಕು. ಅಥವಾ ಆ ಎಲ್ಲ ಪುರಾಣವಚನಗಳು ಮೋಹನಾರ್ಥವಾಗಿ ಎಂದು ಹೇಳಬೇಕು. ಅಂತೂ ಮಹಾಜ್ಞಾನಿಗಳಾದ ಶ್ರೀವಾದಿರಾಜರ ಅಭಿಪ್ರಾಯಕ್ಕೂ ಪುರಾಣಗಳ ವಚನಕ್ಕೂ ಯಾವ ವಿರೋಧವೂ ಇಲ್ಲ ಎಂದು ತಿಳಿಯಬಹುದು.

ಇನ್ನು ಮರಣಹೊಂದದೆ ಇರುವುದಕ್ಕೆ ಅಮೃತಪಾನ ಕಾರಣವೋ? ಶ್ರೀಹರಿಯ ಅನುಗ್ರಹ ಕಾರಣವೋ? ಎನ್ನುವುದನ್ನು ಮುಂದೆ ಚರ್ಚಿಸೋಣ.

**೨. ರಾಹುವು ಅಮೃತಪಾನ ಮಾಡಿದನೇ? ಇಲ್ಲವೇ?**

ಶ್ರೀಹರಿಯು ಮೋಹಿನೀರೂಪದಿಂದ ಅಮೃತವನ್ನು ಕುಡಿಸಲು ಪ್ರಾರಂಭಿಸಿದನು. ಅಮೃತವನ್ನು ಉಣಬಡಿಸುತ್ತಾ ದೇವತೆಗಳ ಪಂಕ್ತಿಯಲ್ಲಿ ಕುಳಿತ ರಾಹುವಿನ ಕೈಯಲ್ಲಿ ಅಮೃತ ಹಾಕಿದ. ರಾಹು ಸ್ವಾಭಾವಿಕವಾಗಿ ಅಸುರ. ಆದ್ದರಿಂದ ಅಮೃತಪಾನಕ್ಕೆ ಅಯೋಗ್ಯ. ಅದಕ್ಕಾಗಿ ಭಗವಂತ ತತ್ಕ್ಷಣದಲ್ಲಿ ಪುರುಷರೂಪವನ್ನು ತೆಗೆದುಕೊಂಡು ಚಕ್ರದಿಂದ ರಾಹುವಿನ ಶಿರಸ್ಸನ್ನು ಕತ್ತರಿಸಿದ. ಈ ಪ್ರಸಂಗವನ್ನು ಆಚಾರ್ಯರು ಮುಂದಿನ ಶ್ಲೋಕದಲ್ಲಿ ವಿವರಿಸುತ್ತಾರೆ.

> ...ಕ್ಷಣೇನ ಭೂತ್ವಾ ಪಿಬತಃ ಸುಧಾಂ ಶಿರೋ ರಾಹೋರ್ನ್ಯಕೃಂತಚ್ಚ ಸುದರ್ಶನೇನ ॥
> ತೇನಾಮೃತಾರ್ಥಂ ಹಿ ಸಹಸ್ರಜನ್ಮಸು ಪ್ರತಪ್ಯ ಭೂಯಸ್ತಪ ಆರಿತೋ ವರಃ ।
> ಸ್ವಯಂಭುವಸ್ತೇನ ಭವಾನ್ ಕರೇऽಸ್ಯ ಬಿಂದುಂ ಸುಧಾಂ ಪ್ರಾಸ್ಯ ಶಿರೋ ಜಹಾರ ॥...

ಈ ಶ್ಲೋಕಗಳಲ್ಲಿ 'ಪಿಬತಃ ಸುಧಾಂ' ಎಂದು ಆಚಾರ್ಯರು ಹೇಳಿದ್ದರಿಂದ ರಾಹು ಅಮೃತಪಾನ ಮಾಡಿದ ಎಂದು ತೋರುತ್ತದೆ.

ಇಲ್ಲಿ 'ಪಾನ' ಎಂದರೆ 'ಜೀವಸಹಿತವಾದ ದೇಹದಲ್ಲಿ ಕುಡಿಯುವ ದ್ರವ ಪದಾರ್ಥ ಕಂಠದ ಕೆಳಭಾಗ ಹಾಗು ಮುಂದೆ ಹೋಗುವದು' ಎಂದು ಅರ್ಥ ಮಾಡಬೇಕು. ಇದು ಪಾನಶಬ್ದದ ನಿಜವಾದ ಅರ್ಥ. ಕುಡಿಯುವದಕ್ಕಾಗಿ 'ಕೈಯಿಂದ ಲೋಟದಲ್ಲಿ ನೀರನ್ನು ತೆಗೆದುಕೊಳ್ಳುವುದು' ಮುಂತಾದ ಕ್ರಿಯೆಗಳು 'ಪಾನ' ಶಬ್ದದ ಔಪಚಾರಿಕವಾದ ಅರ್ಥ. ಈಗ 'ರಾಹು ಅಮೃತಪಾನ ಮಾಡಿದನೇ? ಇಲ್ಲವೇ?' ಎಂಬ ಪ್ರಶ್ನೆಗೆ 'ರಾಹು ಎಂಬ ಜೀವನಿಂದ ಕೂಡಿದ ದೇಹದಲ್ಲಿ ಅಮೃತವು ಕಂಠದ ಕೆಳಗೆ ಇಳಿಯಿತೇ? ಇಲ್ಲವೇ?' ಎಂಬ ಅಭಿಪ್ರಾಯ. ಅರ್ಥಾತ್ ರಾಹು ನಿಜವಾಗಿ ಅಮೃತಪಾನ ಮಾಡಿದನೇ? ಎಂದು ಪ್ರಶ್ನೆಯ ತಾತ್ಪರ್ಯ.

ಈ ಪ್ರಸಂಗದಲ್ಲಿ ಶ್ರೀವಾದಿರಾಜರು 'ರಾಹುವು ಅಮೃತಪಾನ ಮಾಡಲೇ ಇಲ್ಲ' ಎಂದು ಹೇಳುತ್ತಾರೆ. ಉಳಿದ ವ್ಯಾಖ್ಯಾನಕಾರರೂ ಅಸುರನಾದ ರಾಹು ಅಮೃತಪಾನಕ್ಕೆ ಅಯೋಗ್ಯ ಆದ್ದರಿಂದ ಅಮೃತಪಾನ ಮಾಡಲಿಲ್ಲ ಎಂಬ ಅಭಿಪ್ರಾಯ ಬರುವಂತಯೇ ವ್ಯಾಖ್ಯಾನಿಸಿದ್ದಾರೆ.

**ಆಚಾರ್ಯರ ಅಭಿಪ್ರಾಯ ಹೀಗಿರಬಹುದೆ?**

ಆಚಾರ್ಯರು, ಮೇಲಿನ ಶ್ಲೋಕಗಳ ಮೊದಲಿನ ಸಾಲಿನಲ್ಲಿ ರಾಹುವಿನ ಅಮೃತಪಾನ, ಚಕ್ರದಿಂದ ರಾಹುವಿನ ಶಿರಚ್ಛೇದದ ಪ್ರಸಂಗವನ್ನು ಸಂಕ್ಷಿಪ್ತವಾಗಿ ಹೇಳಿದರು. ಮುಂದಿನ ಶ್ಲೋಕಗಳಲ್ಲಿ ಆ ಪ್ರಸಂಗವನ್ನೇ ವಿವರಿಸುತ್ತಾರೆ.

ಅಮೃತವು ದೇವತೆಗಳ ಅಸಾಧಾರಣವಾದ ಅನ್ನ. (**ಅಸಾಧಾರಣಮನ್ನಂ ಹಿ ದೇವಾನಾಂ ಅಮೃತಂ ಸದಾ । ಅನ್ಯಪೀತಿಸ್ತತಸ್ತಸ್ಯ ದೇವಾನಾಂ ಪರಮಾಪ್ರಿಯಾ ॥ ಮ.ಭಾ.ತಾ.ನಿ. 30.67**) ಆದ್ದರಿಂದ ದೇವತೆಯಾಗದ ರಾಹುವು ಅಮೃತವನ್ನು ಹೇಗೆ ಪಡೆದ? ಎಂಬ ಪ್ರಶ್ನೆ ಬಂದಾಗ. ರಾಹು ಅಮೃತಕ್ಕಾಗಿ ಸಾವಿರಜನ್ಮಗಳಲ್ಲಿ ತಪಸ್ಸು ಮಾಡಿ ಅಮೃತಪ್ರಾಪ್ತಿಯಾಗಬೇಕೆಂದು ಬ್ರಹ್ಮನಿಂದ ವರ ಪಡೆದಿದ್ದ. ಆದ್ದರಿಂದ ಭಗವಂತನು ರಾಹುವಿನ ಕೈಯಲ್ಲಿ ಒಂದು ತೊಟ್ಟು ಅಮೃತ ಹಾಕಿ ಶಿರಸ್ಸನ್ನು ಕತ್ತರಿಸಿದ. ಈ ರೀತಿ ಭಗವಂತ ಬ್ರಹ್ಮದೇವರು ರಾಹುವಿಗೆ ಕೊಟ್ಟ 'ಅಮೃತಪ್ರಾಪ್ತಯಾಗಲಿ' ಎಂಬ ವರವನ್ನೂ ನಡೆಸಿಕೊಟ್ಟ. ಅಮೃತವು 'ದೇವತೆಗಳಿಗೆ ಮಾತ್ರ ಮೀಸಲಾದ ಅಸಾಧಾರಣವಾದ ಅನ್ನ' ಎಂಬ ನಿಯಮವನ್ನೂ ಉಳಿಸಿದ.

ಆದ್ದರಿಂದ 'ಕರೇಽಸ್ಯ ಬಿಂದುಂ ಸುಧಾಂ ಪ್ರಾಸ್ಯ' ಎಂಬ ಆಚಾರ್ಯರ ಮಾತನ್ನು ನೋಡಿದಾಗ ರಾಹುವಿನ ಕೈಯಲ್ಲಿ ಅಮೃತ ಬಿದ್ದಿದೆ ಹೊರತು ಅಯೋಗ್ಯನಾದ ರಾಹುವಿಗೆ ಅಮೃತಪಾನ ಮಾಡಲು ಸಾಧ್ಯವಾಗಿಲ್ಲ ಎಂದು ತಿಳಿದು ಬರುತ್ತದೆ. ಮಂದೆ 'ಉತ್ಸಾಹಯುಕ್ತಸ್ಯ ಚ ತತ್ಪ್ರತೀಪಂ ಭವೇದ್ಧಿ ರಾಹೋರಿವ ದುಃಖರೂಪಮ್' 'ರಾಹು ಅಮೃತಪಾನ ಮಾಡಲು ಪ್ರಯತ್ನಿಸಿದ.ಆದರೆ ಅಮೃತಪಾನಮಾಡಲಿಲ್ಲ' ಎಂಬ ಮಾತೂ ಅಮೃತ ಕುಡಿಯಲು ಸಾಧ್ಯವಾಗಲಿಲ್ಲ ಎಂಬುದನ್ನು ಸೂಚಿಸುತ್ತದೆ.

ಆಚಾರ್ಯರು ನೀಡಿದ ಈ ನಿರ್ಣಯಕ್ಕನುಸಾರವಾಗಿ ಅಮೃತಪಾನಮಾಡಿದ್ದಾಗಿ ಹೇಳುವ 'ಅಮೃತಪ್ರಾಶನಾತ್ ಪ್ರಾಣೈರವಿಯುಕ್ತೋಽಸ್ಮಿ ದಾನವ' 'ಪೀತಾಮೃತಸ್ಯ ದೈತ್ಯಸ್ಯ ಮರಣಂ ನಾಸ್ತಿ

ಕರ್ಹಿಚಿತ್' 'ಅಮೃತಾಸ್ವಾದನಾದ್ರಾಹುಃ ಶಿರಶ್ಛಿನ್ನೋಽಪಿ ಸೋಽಮೃತಃ' ಮೊದಲಾದ ಪುರಾಣವಚನಗಳು ದೈತ್ಯಜನಮೋಹನಕ್ಕಾಗಿ ಎಂದು ತಿಳಿಯಬಹುದು.

**೩. ರಾಹುದೇಹದ ಯಾವ ಅವಯವಕ್ಕೆ ಅಮೃತಸ್ಪರ್ಶ?**

ಈ ರೀತಿ ರಾಹು ಅಮೃತಪಾನ ಮಾಡಲಿಲ್ಲ ಎಂದು ಹಿಂದೆ ತಿಳಿದಿದ್ದೇವೆ. ಇನ್ನು ಅಮೃತಸ್ಪರ್ಶ ರಾಹುವಿನ ಯಾವ ಅಂಗಗಳಿಗೆ ಆಯಿತು ಎನ್ನುವದನ್ನು ವಿಮರ್ಶಿಸೋಣ.

ಕ್ಷಿಪ್ತಃ ಕಬಂಧೋಽಸ್ಯ ಶುಭೋದಸಾಗರೇ ತ್ವಯಾ ಸ್ಥಿತೋಽದ್ಯಾಪಿ ಹಿ ತತ್ರ ಸಾಮೃತಃ ।

ಎಂಬ ನಿರ್ಣಯವಾಕ್ಯದಂತೆ ತೋಳುಗಳಿಂದ ಕೂಡಿದ ಮುಂಡವನ್ನು ಶುದ್ಧೋದಕಸಮುದ್ರದಲ್ಲಿ ಎಸೆಯಲ್ಪಟ್ಟಿತು. ಆ ಮುಂಡವು ಅಮೃತಯುಕ್ತವಾದುದ್ದರಿಂದ ಇಂದಿಗೂ ಸಾಯದೇ ಅಲ್ಲೇ ಉಳಿದಿದೆ. ಇಲ್ಲಿ ಆಚಾರ್ಯರು ಕಂಬಂಧಕ್ಕೆ ಅಮೃತದ ಸಂಪರ್ಕವಾದದ್ದನ್ನು ಹೇಳುತ್ತಾರೆ. ಆದರೆ ರಾಹುವಿನ ಶಿರಸ್ಸಿಗೆ ಅಮೃತಸ್ಪರ್ಶವಾಯಿತೇ? ಇಲ್ಲವೇ? ಎನ್ನುವದನ್ನು ಸ್ಫುಟವಾಗಿ ಹೇಳುವದಿಲ್ಲ. ರಾಹುವಿನ ಶಿರಸ್ಸು ದೇವತೆಗಳಿಗೆ ಅಧಿಷ್ಠಾನವಾಗಿ ಇದೆ ಎಂದು ಹೇಳುತ್ತಾರೆ.

ಶ್ರೀವಾದಿರಾಜರು '...ಬಳಿಕ ರಾಹುವಿನ ಕೈಯಿಂದ ಚಿಮ್ಮಿ ತುಟಿಗೆ ತಾಕಿದ ಅಮೃತವು ರುಂಡ ಬೀಳುವುದಕ್ಕೆ ಮೊದಲು ರುಂಡದಲ್ಲಿಯೂ ಹರಡಿತು, ಮುಂಡದಲ್ಲಿಯೂ ಹರಡಿತು. ಆದ್ದರಿಂದ ರಾಹುವಿನ ರುಂಡವೂ ಚಿರಕಾಲಸ್ಥಾಯಿ, ಮುಂಡವೂ ಚಿರಕಾಲಸ್ಥಾಯಿಯಾಯಿತು' ಎಂದು ರಾಹುವಿನ ಶಿರಸ್ಸಿಗೂ ಕಬಂಧಕ್ಕೂ ಅಮೃತಸ್ಪರ್ಶವಾಗಿದೆ ಎಂದು ಹೇಳುತ್ತಾರೆ.

ತಾಮ್ರಪರ್ಣೀಆಚಾರ್ಯರು ಇತರ ವ್ಯಾಖ್ಯಾನಕಾರರ ಎರಡು ಪಕ್ಷಗಳನ್ನು ಹೇಳಿ ತಮ್ಮ ಪಕ್ಷವನ್ನೂ ಹೇಳುತ್ತಾರೆ -

'ಕರೇಽಸ್ಯ ಸುಧಾಬಿಂದುಸಂಬಂಧೇ ಶಿರಸಃ ಸ್ಥಾಯಿತಯಾ ಗ್ರಹತ್ವಂ ಕಬಂಧಸ್ಯಾಸ್ಥಾಯಿತ್ವಂ ಕುತ ಇತಿ ಚೇತ್ ಅತ್ರ ಕೇಚಿದಾಹುಃ ''ಅಮೃತಂ ಹಸ್ತೇ ಪ್ರಕ್ಷಿಪ್ಯ ಶಿರಚ್ಛೇದೇಽಪಿ ಸಂಸ್ಕಾರವಶಾತ್ ಶಿರಸಃ ಭೂಮಿಪತನಾತ್ ಪೂರ್ವಮೇವ ಸಾಮೃತಹಸ್ತಸ್ಯ ಛಿನ್ನೇ ಕಂಠಲಗ್ನೇ ಶಿರಸಿ ಗಲದ್ವಾರೇ ಚ ಸಂಸರ್ಗಾತ್ ಶಿರಃಕಬಂಧಯೋಃ ಸ್ಥಾಯಿತ್ವಮ್'' ಇತಿ, ಅಪರೇ ತು ''ಹಸ್ತಾಖ್ಯಾವಯವೇ ಅಮೃತಸಂಸರ್ಗಮಹಿಮ್ನೈವ ಅಂಗಿನಃ ಸ್ಥಾಯಿತ್ವಂ ಲಭ್ಯತೇ । ತತ್ರ ಉತ್ತಮಾಂಗತ್ವಾತ್ ಶಿರಸೋ ಗ್ರಹತ್ವಮ್'' ಇತಿ ಮನ್ಯಂತೇ । ವಸ್ತುತಸ್ತು 'ಪಿಬತಃ ಸುಧಾಂ ಶಿರಃ' ಇತ್ಯುಕ್ತತ್ವಾತ್ ಅಮೃತಸ್ಯ ಮುಖಸಂಬಂಧಾತ್ ಶಿರಸೋ ಗ್ರಹತ್ವಮ್ । ಕರಸಂಶ್ಲೇಷಾತ್ ಸಬಾಹುಕಬಂಧಸ್ಯಾವಿನಾಶಃ ಇತಿ ನ ಕಾಚಿತ್ ಕಥಂತಾ'

ತಾಮ್ರಪರ್ಣೀಅಭಿಪ್ರಾಯ- 'ಅಮೃತದ ಸಂಪರ್ಕ ಕೈಗೆ ಆಗಿರುವಾಗ ಕೇವಲ ಶಿರಸ್ಸು ಸ್ಥಾಯಿಯಾಗಿ ಉಳಿದು ಕಂಬಂಧ ಏಕೆ ನಾಶವಾಯಿತು? ಎಂಬ ಪ್ರಶ್ನೆಗೆ ಕೆಲವರ ಉತ್ತರ ಹೀಗೆ ಇದೆ.

೧. ಶ್ರೀಹರಿಯು ಕೈಯಲ್ಲಿ ಅಮೃತ ಹಾಕಿ ಶಿರಸ್ಸನ್ನು ಕತ್ತರಿಸಿದರೂ ಸಂಸ್ಕಾರವಶಾತ್ ಭೂಮಿಯ ಮೇಲೆ ಬೀಳುವ ಮುಂಚೆಯೇ, ಅರ್ಥಾತ್ ಶಿರಸ್ಸಿಗೂ ಕಂಠಕ್ಕೂ ಸಂಪರ್ಕವಿರುವಾಗಲೇ ಎರಡಕ್ಕೂ ಅಮೃತದ ಸಂಪರ್ಕವಾಗಿದೆ. ಆದ್ದರಿಂದ ಶಿರಸ್ಸೂ ಸ್ಥಾಯಿ, ಕಬಂಧವೂ ಸ್ಥಾಯಿ ಎಂದು ಕೆಲವರು.

೨. ಇನ್ನು ಕೆಲವರು ಹಸ್ತ ಎಂಬ ಅವಯವಕ್ಕೆ ಅಮೃತಸಂಪರ್ಕವಾಗಿದ್ದರಿಂದ ಶಿರಸ್ಸಿನಿಂದ ಕೂಡಿದ ಕಬಂಧ ಎಂಬ ಸಮಗ್ರವಾದ ಅಂಗಿ ಸ್ಥಾಯಿಯಾಗಿ ಉಳಿದಿದೆ. ಆ ಅಂಗಿಯಲ್ಲಿ ಶಿರಸ್ಸು ಉತ್ತಮಾಂಗವಾಗಿದ್ದರಿಂದ ಗ್ರಹ ಆಯಿತು ಎಂದು ಹೇಳುತ್ತಾರೆ.

೩. ಆಚಾರ್ಯರು 'ಪಿಬತಃ ಸುಧಾಂ ಶಿರಃ' ಎಂದು ಹೇಳಿದ್ದರಿಂದ ಮುಖಕ್ಕೂ ಅಮೃತಸಂಪರ್ಕವಾಗಿದೆ. ಆದ್ದರಿಂದಲೇ ಶಿರಸ್ಸು ಗ್ರಹವಾಯಿತು. ಕೈಗೆ ಅಮೃತದ ಸಂಪರ್ಕವಾಗಿದ್ದರಿಂದ ಬಾಹುವಿನಿಂದ ಸಹಿತವಾದ ಕಬಂಧ ನಾಶವಾಗಲಿಲ್ಲ ಎಂದು ಹೇಳಬೇಕು. ಇದು ತಾಮ್ರಪರ್ಣೀಆಚಾರ್ಯರ ಪಕ್ಷ.

ಶ್ರೀಸತ್ಯಧರ್ಮತೀರ್ಥರು ಭಾಗವತವ್ಯಾಖ್ಯಾನದಲ್ಲಿ ಕೈಗೆ ಮಾತ್ರ ಅಮೃತಸಂಪರ್ಕವಾದದ್ದಾಗಿ ಹೇಳುತ್ತಾರೆ- ''ಪಿಬತಸ್ತಸ್ಯ ಶಿರೋ ಜಹಾರ । ಸುಧಯಾ ಪ್ಲಾವಿತಃ ಕಬಂಧಃ... ತತ್ಸಂಬಂಧಮಾತ್ರತೋಽ-ಜರಾಮರೋಽಪತತ್ ಪಾತಿತಃ ।''

ರಾಹುರ್ಬಾಹುಬಲೇನ ದುರ್ಲಭಮಿತಿ ಜ್ಞಾತ್ವಾಽನ್ಯಪಂಕ್ತೌ ಸ್ಥಿತಃ
ಶ್ರೀಶೇನ ಸ್ವಶಯೇಽರ್ಪಿತಂ ತದಮೃತಂ ದ್ರಾಕ್ ನಾಪಿಬತ್ಕೌತುಕೀ ।
ತರ್ಹ್ಯೇವೇಂದುರವಿಪ್ರಚೋದಿತಹರಿಚ್ಛಿನ್ನಾತ್ಮಮೂರ್ಧಾ ಪತತ್
ಚಾಲಸ್ಯಾದಮೃತಂ ವಿಷಂ ಚ ಭವತೀತ್ಯಾಭಾಣಕಂ ಪ್ರಾಸರತ್ ॥

ಯತ್ತು ಅತ್ರ 'ಅಪ್ಲಾವಿತೋ ಅಸಂಸ್ಪೃಷ್ಟ' ಇತಿ ವ್ಯಾಕರಣಂ ತದದ್ಯಾಪಿ ಜರಾಮೃತಿರಹಿತತಯಾಽವಸ್ಥಾನಹೇತ್ವಂತರಸ್ಯ ಅನುಪನ್ಯಸನಾತ್ ತಸ್ಯೋಪೇಕ್ಷ್ಯಂ ಪರಕೀಯಮ್, ತದನುಸರಂತಃ ಕೇಚನಾಸ್ಮಾಕೀನಾಶ್ಚ ನಾಚಾರ್ಯದರ್ಶನವತ ಇತಿ ಮಹಾಂತಃ ॥70॥

ತಚ್ಛಿರೋಽಮರತಾಂ ತದಾವಿಷ್ಟತ್ವಾತ್ ತತ್ತ್ವಮ್ । 'ಶಿರಸ್ತು ತಸ್ಯ ಗ್ರಹತಾಮವಾಪ ಸುರೈಃ ಸಮಾವಿಷ್ಟಮ್' ಇತಿ ಶ್ರೀಮದುಕ್ತೇಃ । ತುಶ್ಚ 'ತೇನಾಮೃತಾರ್ಥಂ ಹಿ ಸಹಸ್ರಜನ್ಮಸು ಪ್ರತಪ್ಯ ಭೂಯಸ್ತಪ ಆರಿತೋ ವರಃ । ಸ್ವಯಂಭುವಃ' ಇತಿ ಶ್ರೀಮದುಕ್ತವಿಶೇಷಸ್ಯ, ಅಶೇಷವಿದೋ ಹರೇಃ ವಿರಿಂಚರಿರಕ್ಷಯಿಷಯೈವ ಪೀಯೂಷಸ್ಥಾಪನಂ ಪಾಣೌ, ಚಂದ್ರಸೂರ್ಯಸೂಚನಂ ಚ ಸ್ವಸೇವಾಘಟನಾರ್ಥಂ ದೇವಂ ಪ್ರತಿ, ಸತ್ಸು ಸುರೇಷ್ವನ್ಯೇಷು ವಿತಾಭ್ಯಾಮೇವ ಸೂಚನಂ ಲೋಚನನಿಭಾಲನೀಯೇ ಕಾರ್ಯೇ ತನ್ನೇತ್ರತಯಾ 'ಶಶಿಸೂರ್ಯನೇತ್ರಮ್' ಇತಿ ಸ್ಮೃತಾಭ್ಯಾಂ ಯುಕ್ತಂ ಪತ್ಯುಕ್ತಂ ಚ ಕಥಂ ವಿಶ್ವಚಕ್ಷುರ್ನಾಪಶ್ಯದಿತ್ಯಾದಿವಿಶೇಷಸ್ಯ ಚ ದ್ಯೋತಕ ಇತಿ ಧ್ಯೇಯಮ್.... ॥71 ॥'

ಹೀಗೆ ಶ್ರೀವಾದಿರಾಜರು ರುಂಡ, ಮುಂಡ ಎರಡಕ್ಕೂ ಅಮೃತದ ಸಂಪರ್ಕವಾಯಿತು ಎಂದು ಹೇಳುತ್ತಾ ಅಮೃತದ ಸಂಪರ್ಕದಿಂದ ಎರಡೂ ಸ್ಥಾಯಿಯಾಯಿತು ಎಂದು ಹೇಳುತ್ತಾರೆ. ತಾಮ್ರಪರ್ಣೀಆಚಾರ್ಯರು ವಾದಿರಾಜರಂತೆ ಎರಡಕ್ಕೂ ಅಮೃತದ ಸಂಪರ್ಕವನ್ನು ಹೇಳಿ ಅಮೃತಸ್ಪರ್ಶದಿಂದ ಶಿರಸ್ಸು ಗ್ರಹವಾಯಿತು, ಕಬಂಧವು ನಾಶವಾಗದೆ ಹಾಗೆ ಇದೆ ಎಂದು ಹೇಳುತ್ತಾರೆ. ಶ್ರೀಸತ್ಯಧರ್ಮತೀರ್ಥರು ಕೈಗೆ ಮಾತ್ರ ಅಮೃತಸ್ಪರ್ಶವಾಯಿತು ಎಂದು ಹೇಳುತ್ತಾರೆ.

ಇಲ್ಲಿ ಮೇಲೆ ಹೇಳಿದ ಪಕ್ಷಗಳ ಕುರಿತಾಗಿ ಆಲೋಚನೆ ಮಾಡೋಣ. ಶ್ರೀವಾದಿರಾಜರು ಹಾಗು ಶ್ರೀತಾಮ್ರಪರ್ಣೀಆಚಾರ್ಯರು ಕಬಂಧಕ್ಕೆ ಅಮೃತಸ್ಪರ್ಶವಾದಂತೆ ಶಿರಸ್ಸಿಗೂ ಅಮೃತಸ್ಪರ್ಶವಾಗಿದೆ

ಎಂದು ಹೇಳುತ್ತಾರೆ. ಶ್ರೀವಾದಿರಾಜರು ಶಿರಸ್ಸಿಗೆ ಅಮೃತಸ್ಪರ್ಶವಾಗಿದ್ದರಿಂದ ಅದು ಸ್ಥಾಯಿಯಾಯಿತು ಎಂದು ಹೇಳುತ್ತಾರೆ. ತಾಮ್ರಪರ್ಣೀಆಚಾರ್ಯರು ಅಮೃತಸ್ಪರ್ಶದಿಂದಾಗಿ ಶಿರಸ್ಸು ಗ್ರಹವಾಯಿತು ಎಂದು ಹೇಳುತ್ತಾರೆ.

ಇಲ್ಲಿ ಶಿರಸ್ಸಿಗೆ ಪ್ರತ್ಯೇಕವಾಗಿ ಅಮೃತದ ಸಂಪರ್ಕವನ್ನು ಹೇಳಬೇಕೇ? ಬೇಡವೇ? ಎಂಬುದು ಆಲೋಚಿಸಬೇಕಾದ ವಿಷಯ. ರಾಹುವಿನ ದೇಹ ಒಂದು ಅಂಗಿ ಎಂದು ಇಟ್ಟುಕೊಂಡಾಗ ಆ ಅಂಗಿಗೆ ಸಂಬಂಧಿಸಿದ ಯಾವುದೇ ಅಂಗಕ್ಕೆ ಅಮೃತದ ಸಂಪರ್ಕವಾದರೂ ಅಂಗಿಗೆ ಅಮೃತದ ಸಂಪರ್ಕವಾದಂತೆಯೇ. ಅಂದಮೇಲೆ ಕೈಗೆ ಅಮೃತದ ಸ್ಪರ್ಶವಾದರೂ ಶಿರಸ್ಸಿನಿಂದ ಸಹಿತವಾದ ಸಮಗ್ರವಾದ ಅಂಗಿಗೆ ಅಮೃತಸ್ಪರ್ಶವಾದಂತೆ ಸರಿ. ಹೀಗಿರುವಾಗ ಶಿರಸ್ಸು ಸ್ಥಾಯಿಯಾಗುವದಕ್ಕೆ ಪ್ರತ್ಯೇಕವಾಗಿ ಅಮೃತಸಂಪರ್ಕವನ್ನು ಯಾಕೆ ಹೇಳಬೇಕು?

ಗೃಹೀತ್ವಾಮೃತಪಾತ್ರಂ ಹಿ ಗಚ್ಛನ್ಮಾರ್ಗೇ ಕ್ಷುಧಾರ್ದಿತಃ ।
ಕದಂಬೇ ಕಲಶಂ ನ್ಯಸ್ಯ ಯಮುನಾತೀರಗೋ ವಿರಾಟ್ ॥

ಕಾಲಿಯಮರ್ದನ ಪ್ರಸಂಗದಲ್ಲಿ ವಿಷಪೂರಿತವಾದ ಯಮುನೆಯ ಮಡುವಿನ ಹತ್ತಿರದಲ್ಲಿರುವ ಕದಂಬವೃಕ್ಷವು ಗರುಡ ತಂದ ಅಮೃತಕಲಶದ ಸ್ಪರ್ಶದಿಂದದಾಗಿ ವಿಷದಿಂದ ಭಸ್ಮವಾಗದೆ ಹಾಗೆ ಉಳಿದಿತ್ತು ಎಂದು ಹೇಳುತ್ತಾರೆ. ಗರುಡ ಕದಂಬವೃಕ್ಷದ ಎಲ್ಲ ಟೊಂಗೆಗಳ ಮೇಲೆ ಅಮೃತಕಲಶವನ್ನಿಡಲಿಲ್ಲ. ಕದಂಬವೃಕ್ಷದ ಯಾವುದೋ ಒಂದು ಟೊಂಗೆಯ ಮೇಲೆ ಅಮೃತಕಲಶ ಇಟ್ಟ. ಅಷ್ಟಕ್ಕೆ ಎಲ್ಲ ಟೊಂಗೆಗಳೂ, ಕದಂಬವೃಕ್ಷ ಹಾಗೆ ಉಳಿದವು ಎಂಬುದನ್ನು ನೋಡುತ್ತೇವೆ.

ಆದ್ದರಿಂದ ರಾಹುವಿನ ಒಂದು ಅಂಗಕ್ಕೆ ಅಮೃತದ ಸಂಪರ್ಕವಾದರೂ ಶಿರಸ್ಸಿನಿಂದ ಸಹಿತವಾದ ಸಮಗ್ರವಾದ ಅಂಗಿ ಸ್ಥಾಯಿಯಾಯಿತು ಎಂದು ಹೇಳಲು ಯಾವ ಅನುಪಪತ್ತಿಗಳೂ ಬರಲಿಕ್ಕಿಲ್ಲ ಎಂದು ತೋರುತ್ತದೆ.

ತಾಮ್ರಪರ್ಣೀಆಚಾರ್ಯರು ಶಿರಸ್ಸಿಗೂ ಅಮೃತದ ಸ್ಪರ್ಶವಾಯಿತು ಎನ್ನುವದಕ್ಕೆ 'ಪಿಬತಃ ಸುಧಾಂ ಶಿರಃ' ಎಂಬ ಆಚಾರ್ಯರ ವಚನವನ್ನು ಪ್ರಮಾಣವಾಗಿ ಹೇಳುತ್ತಾರೆ. ಅವರು ಉದಾಹರಿಸುವ ಈ ವಾಕ್ಯ ಸಾವಕಾಶ ಎಂದು ತೋರುತ್ತದೆ. 'ಪಿಬತಃ ಸುಧಾಂ ಶಿರಃ ರಾಹೋಃ= ಸುಧಾಂ ಪಿಬತಃ ರಾಹೋಃ ಶಿರಃ' ಎಂದರೆ 'ಅಮೃತವನ್ನು ಕುಡಿಯಲು ಹೊರಟ ರಾಹುವಿನ ಶಿರ' ಎಂದು ಅರ್ಥ ಮಾಡಬೇಕು. ಮುಂದಿನ ಶ್ಲೋಕದಲ್ಲಿಯೇ ಆಚಾರ್ಯರು 'ಕರೇ ಪ್ರಾಸ್ಯ ಶಿರೋ ಜಹಾರ' 'ರಾಹುವಿನ ಕೈಯಲ್ಲಿ ಅಮೃತಬಿಂದು-ವನ್ನು ಹಾಕಿ ಶಿರಸ್ಸನ್ನು ಕತ್ತರಿಸಿದ' ಎಂದು ಹೇಳುತ್ತಾರೆ. ಅಂದಮೇಲೆ ಕೈಯಲ್ಲಿರುವ ಅಮೃತ ಬಾಯಿಗೆ ಬರುವದರಲ್ಲಿಯೇ ಶ್ರೀಹರಿ ಶಿರಸ್ಸನ್ನು ಕತ್ತರಸಿ ಹಾಕಿದ. ಆದ್ದರಿಂದ ರಾಹುವಿನ ಶಿರಸ್ಸಿಗೆ ಅಮೃತಸಂಪರ್ಕ ವಾಗುವ ಅವಕಾಶವೇ ಇಲ್ಲ. ಅದಕ್ಕಾಗಿಯೇ ಸತ್ಯಧರ್ಮತೀರ್ಥರು '*ಶ್ರೀಶೇನ ಸ್ವಶಯೇಽರ್ಪಿತಂ ತದಮೃತಂ ದ್ರಾಜ್ ನಾಪಿಬತ್ಕೌತುಕೀ* ' ಎಂದು '*ಅಶೇಷವಿದೋ ಹರೇಃ ವಿರಿಂಚರಿರಕ್ಷಯಿಷಯೈವ ಪೀಯೂಷಸ್ಥಾಪನಂ ಪಾಣೌ*' ಎಂದು ಕೈಯಲ್ಲಿಯೇ ಅಮೃತ ಇರುವದನ್ನು ಹೇಳಿದ್ದಾರೆ.

**ಅಮೃತವು ಕಂಠದವರೆಗೂ ಇಳಿದಿತ್ತು**

ಮಹಾಭಾರತದಲ್ಲಿ ಹಾಗು ಕೆಲವು ಪುರಾಣಗಳಲ್ಲಿ ಅಮೃತವು ಕಂಠದ ವರೆಗೂ ಇಳಿದಿತ್ತು ಎಂಬುದಾಗೇ ಇದೆ.

ತತಃ ಪಿಬತ್ಸು ತತ್ಕಾಲಂ ದೇವೇಷ್ವಮೃತಮೀಪ್ಸಿತಮ್ ।
ರಾಹುರ್ವಿಬುಧರೂಪೇಣ ದಾನವಃ ಪ್ರಾಪಿಬತ್ತದಾ ॥

ತಸ್ಯ ಕಂಠಮನುಪ್ರಾಪ್ತೇ ದಾನವಸ್ಯಾಮೃತೇ ತದಾ ।
ಆಖ್ಯಾತಂ ಚಂದ್ರಸೂರ್ಯಾಭ್ಯಾಂ ಸುರಾಣಾಂ ಹಿತಕಾಮ್ಯಯಾ ॥

ತತೋ ಭಗವತಾ ತಸ್ಯ ಶಿರಶ್ಛಿನ್ನಮಲಂಕೃತಮ್ ।
ಚಕ್ರಾಯುಧೇನ ಚಕ್ರೇಣ ಪಿಬತೋಽಮೃತಮೋಜಸಾ ॥ ಆದಿ.19.5-7 ॥

ನ ಮೇ ಕಂಠಾದಧೋಭಾಗಮಾಗತಂ ಮಮ ಚಕ್ರಿಣಾ ।
ಶಿರಶ್ಛಿನ್ನಂ ಮಹಾರಾಜ ತತ್ರ ಪ್ರಾಣಾಸ್ತತಃ ಸ್ಥಿತಾಃ ॥

ಮೇಲೆ ಉದಾಹರಿಸಿದ ಭಾರತ ಹಾಗು ವಿಷ್ಣುಧರ್ಮೋತ್ತರಪುರಾಣದಲ್ಲಿ ಸ್ಪಷ್ಟವಾಗಿ ಅಮೃತವು ಕಂಠದ ವರೆಗೆ ಬಂದುದಾಗಿ ಹೇಳುತ್ತಾರೆ. ಆದ್ದರಿಂದ ಶಿರಸ್ಸಿಗೂ ಅಮೃತದ ಸಂಪರ್ಕ ಹೇಳಬೇಕು ಎಂದು ತೋರುತ್ತದೆ. ಆದರೆ ಭಾರತಪುರಾಣಗಳು ನಿರ್ಣೇಯಗ್ರಂಥಗಳಾಗಿವೆ. ಆದ್ದರಿಂದ ನಿರ್ಣೀತವಾದ ಗ್ರಂಥಗಳಿಗೆ ಅನುಗುಣವಾಗಿ ಅವುಗಳಿಗೆ ಅರ್ಥ ಹೇಳಬೇಕು. ನಿರ್ಣೀತಗ್ರಂಥವಾದ ತಾತ್ಪರ್ಯ ನಿರ್ಣಯದಲ್ಲಿ 'ಕರೇಽಸ್ಯ ಬಿಂದುಂ ಸುಧಾಂ ಪ್ರಾಸ್ಯ ಶಿರೋ ಜಹಾರ' 'ಕೈಯಲ್ಲಿ ಅಮೃತವನ್ನು ಹಾಕಿ ಶಿರಸ್ಸನ್ನು ಕತ್ತರಿಸಿದ ಎಂದು' ಹೇಳಿದ್ದಾರೆ. ಆದ್ದರಿಂದ 'ಅಮೃತವು ಕಂಠಗತವಾಯಿತು' ಎಂಬ ಭಾರತದ ಮಾತು, ವಿಷ್ಣುಧರ್ಮೋತ್ತರದ ವಚನ ಪ್ರಕ್ಷಿಪ್ತವಾಗಿರಬೇಕು. ಅದು ಪ್ರಕ್ಷಿಪ್ತವಲ್ಲ ಎಂದಾದರೆ ಭಾರತದ ವಚನ ದರ್ಶನಭಾಷೆಯಿಂದ ಪ್ರವೃತ್ತವಾದದ್ದು ಎಂದು ತಿಳಿಯಬೇಕು. ವಿಷ್ಣುಧರ್ಮೋತ್ತರದ ವಚನ ದೈತ್ಯಜನಮೋಹನಕ್ಕಾಗಿ ಎಂದು ತಿಳಿಯಬೇಕು.

ಅಮೃತಮಥನದ ಇದೇ ಪ್ರಸಂಗದಲ್ಲಿ ಬರುವ ಇನ್ನೊಂದು ಅಂಶವನ್ನೂ ನಾವು ಗಮನಿಸಬೇಕು. ಆಚಾರ್ಯರು 'ಭಗವಂತ ಮೋಹಿನೀರೂಪವನ್ನು ಬಿಟ್ಟು ಪುರುಷರೂಪದಿಂದ ರಾಹುವಿನ ಶಿರಸ್ಸನ್ನು ಕತ್ತರಿಸಿದ' ಎಂದು ಹೇಳುತ್ತಾರೆ. ಆದರೆ ಭಾರತಭಾಗವತಗಳಲ್ಲಿ 'ಭಗವಂತ ರಾಹುವಿನ ಶಿರಸ್ಸನ್ನು ಕತ್ತರಿಸಿ ಬಳಿಕ ಮೋಹಿನೀರೂಪವನ್ನು ಬಿಟ್ಟು ತನ್ನ ರೂಪವನ್ನು ಸ್ವೀಕರಿಸಿದ' ಎಂದು ಕಥೆ ಇದೆ. ಇಲ್ಲಿ ಆಚಾರ್ಯರ ನಿರ್ಣಯಕ್ಕನುಸಾರವಾಗಿಯೇ ಭಾರತಭಾಗವತಗಳನ್ನು ಹೊಂದಿಸಿಕೊಳ್ಳಬೇಕು. ಹೊರತು ಭಾರತ-ಭಾಗವತಗಳಿಗನುಸಾರವಾಗಿ ಆಚಾರ್ಯರ ಮಾತುಗಳನ್ನು ಅರ್ಥೈಸಬಾರದು. ಈ ತರಹದ ನೂರಾರು ಪ್ರಸಂಗಗಳು ಭಾರತಭಾಗವತಪುರಾಣಗಳಲ್ಲಿ ಕಂಡುಬರುತ್ತವೆ.

ಇನ್ನು ಕಂಬಂಧಕ್ಕೆ ಅಮೃತಸ್ಪರ್ಶ ಆಯಿತೇ? ಇಲ್ಲವೇ? ಎನ್ನುವದಕ್ಕೆ ಅನೇಕ ವ್ಯಾಖ್ಯಾನಕಾರರ ಅಭಿಪ್ರಾಯವನ್ನು ತಿಳಿಯೋಣ.

ಎಂದು ಹೇಳುತ್ತಾರೆ. ಶ್ರೀವಾದಿರಾಜರು ಶಿರಸ್ಸಿಗೆ ಅಮೃತಸ್ಪರ್ಶವಾಗಿದ್ದರಿಂದ ಅದು ಸ್ಥಾಯಿಯಾಯಿತು ಎಂದು ಹೇಳುತ್ತಾರೆ. ತಾಮ್ರಪರ್ಣೀಆಚಾರ್ಯರು ಅಮೃತಸ್ಪರ್ಶದಿಂದಾಗಿ ಶಿರಸ್ಸು ಗ್ರಹವಾಯಿತು ಎಂದು ಹೇಳುತ್ತಾರೆ.

ಇಲ್ಲಿ ಶಿರಸ್ಸಿಗೆ ಪ್ರತ್ಯೇಕವಾಗಿ ಅಮೃತದ ಸಂಪರ್ಕವನ್ನು ಹೇಳಬೇಕೇ? ಬೇಡವೇ? ಎಂಬುದು ಆಲೋಚಿಸಬೇಕಾದ ವಿಷಯ. ರಾಹುವಿನ ದೇಹ ಒಂದು ಅಂಗಿ ಎಂದು ಇಟ್ಟುಕೊಂಡಾಗ ಆ ಅಂಗಿಗೆ ಸಂಬಂಧಿಸಿದ ಯಾವುದೇ ಅಂಗಕ್ಕೆ ಅಮೃತದ ಸಂಪರ್ಕವಾದರೂ ಅಂಗಿಗೆ ಅಮೃತದ ಸಂಪರ್ಕವಾದಂತೆಯೇ. ಅಂದಮೇಲೆ ಕೈಗೆ ಅಮೃತದ ಸ್ಪರ್ಶವಾದರೂ ಶಿರಸ್ಸಿನಿಂದ ಸಹಿತವಾದ ಸಮಗ್ರವಾದ ಅಂಗಿಗೆ ಅಮೃತಸ್ಪರ್ಶವಾದಂತೆ ಸರಿ. ಹೀಗಿರುವಾಗ ಶಿರಸ್ಸು ಸ್ಥಾಯಿಯಾಗುವದಕ್ಕೆ ಪ್ರತ್ಯೇಕವಾಗಿ ಅಮೃತಸಂಪರ್ಕವನ್ನು ಯಾಕೆ ಹೇಳಬೇಕು?

ಗೃಹೀತ್ವಾಮೃತಪಾತ್ರಂ ಹಿ ಗಚ್ಛನ್ಮಾರ್ಗೇ ಕ್ಷುಧಾರ್ದಿತಃ ।
ಕದಂಬೇ ಕಲಶಂ ನ್ಯಸ್ಯ ಯಮುನಾತೀರಗೋ ವಿರಾಟ್ ॥

ಕಾಲಿಯಮರ್ದನ ಪ್ರಸಂಗದಲ್ಲಿ ವಿಷಪೂರಿತವಾದ ಯಮುನೆಯ ಮಡುವಿನ ಹತ್ತಿರದಲ್ಲಿರುವ ಕದಂಬವೃಕ್ಷವು ಗರುಡ ತಂದ ಅಮೃತಕಲಶದ ಸ್ಪರ್ಶದಿಂದದಾಗಿ ವಿಷದಿಂದ ಭಸ್ಮವಾಗದೆ ಹಾಗೆ ಉಳಿದಿತ್ತು ಎಂದು ಹೇಳುತ್ತಾರೆ. ಗರುಡ ಕದಂಬವೃಕ್ಷದ ಎಲ್ಲ ಟೊಂಗೆಗಳ ಮೇಲೆ ಅಮೃತಕಲಶವನ್ನಿಡಲಿಲ್ಲ. ಕದಂಬವೃಕ್ಷದ ಯಾವುದೋ ಒಂದು ಟೊಂಗೆಯ ಮೇಲೆ ಅಮೃತಕಲಶ ಇಟ್ಟ. ಅಷ್ಟಕ್ಕೆ ಎಲ್ಲ ಟೊಂಗೆಗಳೂ, ಕದಂಬವೃಕ್ಷ ಹಾಗೆ ಉಳಿದವು ಎಂಬುದನ್ನು ನೋಡುತ್ತೇವೆ.

ಆದ್ದರಿಂದ ರಾಹುವಿನ ಒಂದು ಅಂಗಕ್ಕೆ ಅಮೃತದ ಸಂಪರ್ಕವಾದರೂ ಶಿರಸ್ಸಿನಿಂದ ಸಹಿತವಾದ ಸಮಗ್ರವಾದ ಅಂಗಿ ಸ್ಥಾಯಿಯಾಯಿತು ಎಂದು ಹೇಳಲು ಯಾವ ಅನುಪಪತ್ತಿಗಳೂ ಬರಲಿಕ್ಕಿಲ್ಲ ಎಂದು ತೋರುತ್ತದೆ.

ತಾಮ್ರಪರ್ಣೀಆಚಾರ್ಯರು ಶಿರಸ್ಸಿಗೂ ಅಮೃತದ ಸ್ಪರ್ಶವಾಯಿತು ಎನ್ನುವದಕ್ಕೆ 'ಪಿಬತಃ ಸುಧಾಂ ಶಿರಃ' ಎಂಬ ಆಚಾರ್ಯರ ವಚನವನ್ನು ಪ್ರಮಾಣವಾಗಿ ಹೇಳುತ್ತಾರೆ. ಅವರು ಉದಾಹರಿಸುವ ಈ ವಾಕ್ಯ ಸಾವಕಾಶ ಎಂದು ತೋರುತ್ತದೆ. 'ಪಿಬತಃ ಸುಧಾಂ ಶಿರಃ ರಾಹೋಃ= ಸುಧಾಂ ಪಿಬತಃ ರಾಹೋಃ ಶಿರಃ' ಎಂದರೆ 'ಅಮೃತವನ್ನು ಕುಡಿಯಲು ಹೊರಟ ರಾಹುವಿನ ಶಿರ' ಎಂದು ಅರ್ಥ ಮಾಡಬೇಕು. ಮುಂದಿನ ಶ್ಲೋಕದಲ್ಲಿಯೇ ಆಚಾರ್ಯರು 'ಕರೇ ಪ್ರಾಸ್ಯ ಶಿರೋ ಜಹಾರ' 'ರಾಹುವಿನ ಕೈಯಲ್ಲಿ ಅಮೃತಬಿಂದು-ವನ್ನು ಹಾಕಿ ಶಿರಸ್ಸನ್ನು ಕತ್ತರಿಸಿದ' ಎಂದು ಹೇಳುತ್ತಾರೆ. ಅಂದಮೇಲೆ ಕೈಯಲ್ಲಿರುವ ಅಮೃತ ಬಾಯಿಗೆ ಬರುವದರಲ್ಲಿಯೇ ಶ್ರೀಹರಿ ಶಿರಸ್ಸನ್ನು ಕತ್ತರಿಸಿ ಹಾಕಿದ. ಆದ್ದರಿಂದ ರಾಹುವಿನ ಶಿರಸ್ಸಿಗೆ ಅಮೃತಸಂಪರ್ಕವಾಗುವ ಅವಕಾಶವೇ ಇಲ್ಲ. ಅದಕ್ಕಾಗಿಯೇ ಸತ್ಯಧರ್ಮತೀರ್ಥರು '*ಶ್ರೀಶೇನ ಸ್ವಶಯೇಽರ್ಪಿತಂ ತದಮೃತಂ ದ್ರಾಙ್ ನಾಪಿಬತ್ಕೌತುಕೀ* ' ಎಂದು '*ಅಶೇಷವಿದೋ ಹರೇಃ ವಿರಿಂಚಿರಿರಕ್ಷಯಿಷಯ್ಯೈವ ಪೀಯೂಷಸ್ಥಾಪನಂ ಪಾಣೌ*' ಎಂದು ಕೈಯಲ್ಲಿಯೇ ಅಮೃತ ಇರುವದನ್ನು ಹೇಳಿದ್ದಾರೆ.

**ಅಮೃತವು ಕಂಠದವರೆಗೂ ಇಳಿದಿತ್ತು**

ಮಹಾಭಾರತದಲ್ಲಿ ಹಾಗು ಕೆಲವು ಪುರಾಣಗಳಲ್ಲಿ ಅಮೃತವು ಕಂಠದ ವರೆಗೂ ಇಳಿದಿತ್ತು ಎಂಬುದಾಗೇ ಇದೆ.

ತತಃ ಪಿಬತ್ಸು ತತ್ಕಾಲಂ ದೇವೇಷ್ವಮೃತಮೀಪ್ಸಿತಮ್ ।
ರಾಹುರ್ವಿಬುಧರೂಪೇಣ ದಾನವಃ ಪ್ರಾಪಿಬತ್ತದಾ ॥

ತಸ್ಯ ಕಂಠಮನುಪ್ರಾಪ್ತೇ ದಾನವಸ್ಯಾಮೃತೇ ತದಾ ।
ಆಖ್ಯಾತಂ ಚಂದ್ರಸೂರ್ಯಾಭ್ಯಾಂ ಸುರಾಣಾಂ ಹಿತಕಾಮ್ಯಯಾ ॥

ತತೋ ಭಗವತಾ ತಸ್ಯ ಶಿರಶ್ಛಿನ್ನಮಲಂಕೃತಮ್ ।
ಚಕ್ರಾಯುಧೇನ ಚಕ್ರೇಣ ಪಿಬತೋಽಮೃತಮೋಜಸಾ ॥ ಆದಿ.19.5-7 ॥

ನ ಮೇ ಕಂಠಾದಧೋಭಾಗಮಾಗತಂ ಮಮ ಚಕ್ರಿಣಾ ।
ಶಿರಶ್ಛಿನ್ನಂ ಮಹಾರಾಜ ತತ್ರ ಪ್ರಾಣಾಸ್ತತಃ ಸ್ಥಿತಾಃ ॥

ಮೇಲೆ ಉದಾಹರಿಸಿದ ಭಾರತ ಹಾಗು ವಿಷ್ಣುಧರ್ಮೋತ್ತರಪುರಾಣದಲ್ಲಿ ಸ್ಪಷ್ಟವಾಗಿ ಅಮೃತವು ಕಂಠದ ವರೆಗೆ ಬಂದುದಾಗಿ ಹೇಳುತ್ತಾರೆ. ಆದ್ದರಿಂದ ಶಿರಸ್ಸಿಗೂ ಅಮೃತದ ಸಂಪರ್ಕ ಹೇಳಬೇಕು ಎಂದು ತೋರುತ್ತದೆ. ಆದರೆ ಭಾರತಪುರಾಣಗಳು ನಿರ್ಣೇಯಗ್ರಂಥಗಳಾಗಿವೆ. ಆದ್ದರಿಂದ ನಿರ್ಣೇತವಾದ ಗ್ರಂಥಗಳಿಗೆ ಅನುಗುಣವಾಗಿ ಅವುಗಳಿಗೆ ಅರ್ಥ ಹೇಳಬೇಕು. ನಿರ್ಣೇತಗ್ರಂಥವಾದ ತಾತ್ಪರ್ಯ ನಿರ್ಣಯದಲ್ಲಿ 'ಕರೇಽಸ್ಯ ಬಿಂದುಂ ಸುಧಾಂ ಪ್ರಾಸ್ಯ ಶಿರೋ ಜಹಾರ' 'ಕೈಯಲ್ಲಿ ಅಮೃತವನ್ನು ಹಾಕಿ ಶಿರಸ್ಸನ್ನು ಕತ್ತರಿಸಿದ ಎಂದು' ಹೇಳಿದ್ದಾರೆ. ಆದ್ದರಿಂದ 'ಅಮೃತವು ಕಂಠಗತವಾಯಿತು' ಎಂಬ ಭಾರತದ ಮಾತು, ವಿಷ್ಣುಧರ್ಮೋತ್ತರದ ವಚನ ಪ್ರಕ್ಷಿಪ್ತವಾಗಿರಬೇಕು. ಅದು ಪ್ರಕ್ಷಿಪ್ತವಲ್ಲ ಎಂದಾದರೆ ಭಾರತದ ವಚನ ದರ್ಶನಭಾಷೆಯಿಂದ ಪ್ರವೃತ್ತವಾದದ್ದು ಎಂದು ತಿಳಿಯಬೇಕು. ವಿಷ್ಣುಧರ್ಮೋತ್ತರದ ವಚನ ದೈತ್ಯಜನಮೋಹನಕ್ಕಾಗಿ ಎಂದು ತಿಳಿಯಬೇಕು.

ಅಮೃತಮಥನದ ಇದೇ ಪ್ರಸಂಗದಲ್ಲಿ ಬರುವ ಇನ್ನೊಂದು ಅಂಶವನ್ನೂ ನಾವು ಗಮನಿಸಬೇಕು. ಆಚಾರ್ಯರು 'ಭಗವಂತ ಮೋಹಿನೀರೂಪವನ್ನು ಬಿಟ್ಟು ಪುರುಷರೂಪದಿಂದ ರಾಹುವಿನ ಶಿರಸ್ಸನ್ನು ಕತ್ತರಿಸಿದ' ಎಂದು ಹೇಳುತ್ತಾರೆ. ಆದರೆ ಭಾರತಭಾಗವತಗಳಲ್ಲಿ 'ಭಗವಂತ ರಾಹುವಿನ ಶಿರಸ್ಸನ್ನು ಕತ್ತರಿಸಿ ಬಳಿಕ ಮೋಹಿನೀರೂಪವನ್ನು ಬಿಟ್ಟು ತನ್ನ ರೂಪವನ್ನು ಸ್ವೀಕರಿಸಿದ' ಎಂದು ಕಥೆ ಇದೆ. ಇಲ್ಲಿ ಆಚಾರ್ಯರ ನಿರ್ಣಯಕ್ಕನುಸಾರವಾಗಿಯೇ ಭಾರತಭಾಗವತಗಳನ್ನು ಹೊಂದಿಸಿಕೊಳ್ಳಬೇಕು. ಹೊರತು ಭಾರತ-ಭಾಗವತಗಳಿಗನುಸಾರವಾಗಿ ಆಚಾರ್ಯರ ಮಾತುಗಳನ್ನು ಅರ್ಥೈಸಬಾರದು. ಈ ತರಹದ ನೂರಾರು ಪ್ರಸಂಗಗಳು ಭಾರತಭಾಗವತಪುರಾಣಗಳಲ್ಲಿ ಕಂಡುಬರುತ್ತವೆ. .

ಇನ್ನು ಕಬಂಧಕ್ಕೆ ಅಮೃತಸ್ಪರ್ಶ ಆಯಿತೇ? ಇಲ್ಲವೇ? ಎನ್ನುವದಕ್ಕೆ ಅನೇಕ ವ್ಯಾಖ್ಯಾನಕಾರರ ಅಭಿಪ್ರಾಯವನ್ನು ತಿಳಿಯೋಣ.

ಚಕ್ರೇಣ ಕ್ಷುರಾಧಾರೇಣ ಜಹಾರ ಪಿಬತಃ ಶಿರಃ ।
ಶಿರಸ್ತ್ವಮರತಾಂ ನೀತಂ ಅಜೋ ಗ್ರಹಮಚೀಕ್ಲೃಪತ್ ॥
ಯಸ್ತು ಪರ್ವಣಿ ಚಂದ್ರಾರ್ಕೌ ಅಭಿಧಾವತಿ ವೈರಧೀಃ ॥' ಭಾಗ.8.8.70-72.

ಭಾಗವತದ ಈ ಶ್ಲೋಕಕ್ಕೆ ವ್ಯಾಖ್ಯಾನವನ್ನು ಬರೆದ ವಿಶ್ವನಾಥರೂ ದೇಹಕ್ಕೆ ಅಮೃತಸ್ಪರ್ಶವಾದುದ್ದಾಗಿ ಹೇಳುತ್ತಾರೆ. 'ಹರಿರಜಿತರೂಪೀ ಶಿರೋ ಜಹಾರ । ಆ ಈಷತ್ ಪ್ಲಾವಿತಃ' ಎಂದು.

ಇನ್ನನೇಕ ವ್ಯಾಖ್ಯಾನಕಾರರು ಈ ಮಾತನ್ನು ಒಪ್ಪುವದಿಲ್ಲ. ಅವರ ಮಾತುಗಳನ್ನು ನೋಡೋಣ.

1. ಅನ್ವಿತಾರ್ಥಪ್ರಕಾಶಿಕಾ - 'ಅಮೃತಂ ಪಿಬತಸ್ತಸ್ಯ ರಾಹೋಃ ಶಿರೋ ಜಹಾರ ಕಾಯಾತ್ ಪೃಥಕ್ ಕೃತವಾನ್ । ತಸ್ಯ ಕಬಂಧಃ ಶಿರೋರಹಿತದೇಹಸ್ತು ಸುಧಯಾ ಅಪ್ಲಾವಿತೋ ಅಸಂಸ್ಪೃಷ್ಟಃ ಯತಃ ಅಪತತ್ ಮೃತ ಇತ್ಯರ್ಥಃ ।'

2. ವೀರರಾಘವಃ - 'ತಸ್ಯ ಸ್ವರ್ಭಾನೋಃ ಕಬಂಧಃ ಸುಧಯಾಽಪ್ಲಾವಿತಃ ಅಸಂಸ್ಪೃಷ್ಟೋಽಪತತ್ । ಅಮೃತಸ್ಯ ಕಂಠಾದಧೋ ನಿಸ್ಸಾರಣಾತ್ಪೂರ್ವಮೇವಾಸ್ಯ ಶಿರಸಶ್ಛಿನ್ನತ್ವಾತ್ ಅಮೃತಸ್ಪರ್ಶಾಭಾವಾತ್ ಕಬಂಧಃ ಪತಿತಃ ।'

3. ಶುಕದೇವಃ - 'ಕಬಂಧಃ ಸುಧಯಾ ಅಪ್ಲಾವಿತೋಽಸಂಸ್ಕೃತಃ ಸುಧಾಯಾಃ ಕಂಠಾದಧೋಽಪ್ರವೇಶಾತ್..'

ಹೀಗೆ ಭಾಗವತದ ಇನ್ನುಳಿದ ವ್ಯಾಖ್ಯಾನಕಾರರು ಕಬಂಧಕ್ಕೆ ಅಮೃತದ ಸಂಪರ್ಕವಾಗದೆ ಅದು ಮೃತವಾಗಿದೆ ಎಂದು ಹೇಳುತ್ತಾರೆ. ಆದರೆ ಇದಕ್ಕೆ ಭಾರತದ ವಿರೋಧವು ಬರುತ್ತದೆ ಆದ್ದರಿಂದ ಇತರ ವ್ಯಾಖ್ಯಾನಕಾರರು ಹೇಳುವ ವಿಷಯ ಸರಿಯಲ್ಲ ಎಂದು ತಿಳಿಯಬೇಕು. ಆಚಾರ್ಯರು ಹೇಳುವ 'ಸ್ಥಿತೋಽದ್ಯಾಪಿ ಹಿ ತತ್ರ ಸಾಮೃತಃ' ಎಂಬ ಮಾತಿಗೆ ಮಹಾಭಾರತದ ವಚನವು ಪೋಷಕವಾಗಿದೆ.

ಭಾರತದ ಉದ್ಯೋಗಪರ್ವದಲ್ಲಿ ಬರುವ ಪ್ರಸಂಗ. ವಿಶ್ವಾಮಿತ್ರರಿಗೆ ಗುರುದಕ್ಷಿಣೆಯನ್ನು ಕೊಡುವುದಕ್ಕಾಗಿ ಗಾಲವರು ಚಿಂತೆಮಾಡುತ್ತ ಶ್ರೀಹರಿಗೆ ಶರಣು ಹೋಗುತ್ತಾರೆ. ಆಗ ಗರುಡನು ಬಂದು ಗುರುದಕ್ಷಣೆಗಾಗಿ ಅಪರೂಪದ ಕುದುರೆಗಳನ್ನು ಕೊಡಿಸುವದಾಗಿ ಹೇಳುತ್ತಾನೆ. ಗರುಡ ಆ ಕುದುರೆಗಳನ್ನು ಹುಡುಕುವ ನೆಪದಿಂದ ಎಲ್ಲ ದಿಕ್ಕುಗಳಿಗೂ ಕರೆದುಕೊಂಡು ಹೋಗಿ ಆ ಆ ದಿಕ್ಕುಗಳಲ್ಲಿರುವ ಚಿತ್ರವಿಚಿತ್ರವಾದ ಪದಾರ್ಥಗಳನ್ನು ತೋರಿಸುತ್ತಾರೆ. ಪಶ್ಚಿಮದಿಕ್ಕಿಗೆ ಹೋದಾಗ ಪಶ್ಚಿಮ ಸಮುದ್ರದಲ್ಲಿ ಸೂರ್ಯನಂತೆ ಪ್ರಕಾಶಮಾನವಾದ ರಾಹುವಿನ ದೇಹವನ್ನು ತೋರಿಸುತ್ತಾರೆ.

ಅತ್ರ ಮಧ್ಯೇ ಸಮುದ್ರಸ್ಯ ಕಬಂಧಃ ಪ್ರತಿದೃಶ್ಯತೇ ।
ಸ್ವರ್ಭಾನೋಃ ಸೂರ್ಯಕಲ್ಪಸ್ಯ ಸೋಮಸೂರ್ಯೌ ಜಿಘಾಂಸತಃ ॥ 110.11.

ಈ ಮಾತಿನಿಂದ ರಾಹುವಿನ ದೇಹ ಮೃತವಾಗದೇ ಸಮುದ್ರದಲ್ಲಿ ಇರುವುದು ಸಿದ್ಧವಾಗುತ್ತದೆ.

ಹೀಗೆ ಆಚಾರ್ಯರ ಪ್ರತಿಯೊಂದು ಮಾತುಗಳೂ ಪ್ರಮಾಣಶುದ್ಧ ಪದ್ಧತಿಯಲ್ಲಿ ನಿರೂಪಿತವಾಗಿರುತ್ತವೆ. ಭಾರತಪುರಾಣಾದಿ ಆಕರಗ್ರಂಥಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಆಚಾರ್ಯರ ಪ್ರಾಮಾಣಿಕತೆ ನಮಗೆ ಮನದಟ್ಟಾಗುತ್ತದೆ.

**೪. ರಾಹುಗ್ರಹ ಯಾವುದು ? ರಾಹುವಿನಿಂದ ಕೂಡಿದ ತಲೆಯೋ? ದೇವತೆಗಳಿಂದ ಕೂಡಿದ ತಲೆಯೋ?**

'ಶಿರಸ್ತು ತಸ್ಯ ಗ್ರಹತಾಮುವಾಪ ಸುರೈಃ ಸಮಾವಿಷ್ಟಮಥೋ ಸಬಾಹುಃ' ಎಂದು ರಾಹುಗ್ರಹದ ವಿಷಯದಲ್ಲಿ ಆಚಾರ್ಯರು ಹೇಳಿದ ಮಾತು. ಆ ಮಾತಿಗೆ 'ದೇವತೆಗಳ ಆವೇಶದಿಂದ ಕೂಡಿದ ರಾಹುವಿನ ಶಿರಸ್ಸು ಗ್ರಹವಾಯಿತು' ಎಂಬ ಅರ್ಥ ಬರುತ್ತದೆ. ಇಲ್ಲಿ ಮೇಲ್ನೋಟಕ್ಕೆ ರಾಹು ಎಂಬ ಅಸುರ ಗ್ರಹನಾದ ಎಂದು ತೋರುವದಿಲ್ಲ.

ಶ್ರೀವಾದಿರಾಜರು ರಾಹು ಎಂಬ ಅಸುರಚೇತನನಿಗೆ ಔಪಚಾರಿಕವಾದ ಗ್ರಹತ್ವವನ್ನು ಹೇಳುತ್ತಾರೆ. ಹಾಗೆ ಹೇಳುವುದರ ಜೊತೆಗೆ ರಾಹುವಿನ ಹೆಸರಿನಲ್ಲಿ ನೀಡುವ ಆಹುತಿಯನ್ನು ಕೇತುನಾಮಕರಾದ ದೇವತೆಗಳೇ ಸ್ವೀಕರಿಸುತ್ತಾರೆ. ದೈತ್ಯರಿಗೆ ಯಜ್ಞಾಹುತಿಯನ್ನು ಸ್ವೀಕರಿಸುವ ಅಧಿಕಾರವಿಲ್ಲ. ಅವೈಷ್ಣವರ ಆಹುತಿಯಿಂದಲೇ ಅವನ ಜೀವನ. ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಚಂದ್ರಸೂರ್ಯರನ್ನು ನುಂಗುತ್ತ ದ್ವೇಷ ಸಾಧಿಸುವದಕ್ಕಾಗಿ ಮಾತ್ರ ರಾಹುವು ಶಿರಸ್ಸಿನಲ್ಲಿ ಸನ್ನಿಹಿತನಾಗಿದ್ದಾನೆ. ಇದಿಷ್ಟು ವಾದಿರಾಜರ ಅಭಿಪ್ರಾಯ.

ಶ್ರೀವರದರಾಜಾಚಾರ್ಯರು - 'ತಸ್ಯ ರಾಹೋಃ ಶಿರಃ ಸುರೈಃ ದೇವೈಃ ಸಮಾವಿಷ್ಟಂ ಸತ್ ಗ್ರಹತಾಂ ನವಗ್ರಹೇಷು ಗ್ರಹರೂಪತ್ವಮವಾಪ' ಎಂದು 'ಶಿರಸ್ಸು ಒಂಬತ್ತು ಗ್ರಹಗಳಲ್ಲಿ ಒಂದು ಗ್ರಹವಾಯಿತು' ಎಂದು ಬರೆಯುತ್ತಾರೆ.

ಜನಾರ್ದನಭಟ್ಟರು - 'ತಸ್ಯ ರಾಹೋಃ ಸುರೈಃ ಸಮಾವಿಷ್ಟಂ ಪ್ರವಿಷ್ಟಂ ಶಿರಃ, ಗ್ರಹತಾಂ ಗೃಹ್ಣಾತಿ ಗ್ರಸತೀತಿ ಗ್ರಹಃ, ತಸ್ಯ ಭಾವಃ ಗ್ರಹತಾ । ಚಂದ್ರಸೂರ್ಯಗ್ರಹತ್ವಮವಾಪ । ತದುಕ್ತಂ ಆದಿಪರ್ವಣಿ- ತತೋ ವೈರವಿನಿರ್ಬಂಧಃ ಕೃತೋ ರಾಹುಮುಖೇನ ವೈ । ಶಾಶ್ವತಶ್ಚಂದ್ರಸೂರ್ಯಾಭ್ಯಾಂ ಗ್ರಸತ್ಯದ್ಯಾಪಿ ಚೈವ ತೌ ॥' ಇತಿ'

ಎಂದು ವ್ಯಾಖ್ಯಾನಿಸುತ್ತಾ ದೇವತೆಗಳ ಆವೇಶದಿಂದ ಕೂಡಿದ ಶಿರಸ್ಸು ಚಂದ್ರಸೂರ್ಯರನ್ನು ನುಂಗುವ 'ಗ್ರಹಿಸುವ' ಗ್ರಹವಾಯಿತು ಎಂದು ಹೇಳುತ್ತಾರೆ. ಇವರ ಪ್ರಕಾರ 'ಗ್ರಹಿಸುತ್ತದೆ' ಆದ್ದರಿಂದ 'ಗ್ರಹ' ಎಂದು ಅಭಿಪ್ರಾಯ.

ತಾಮ್ರಪರ್ಣೀಆಚಾರ್ಯರು 'ರಾಹುಣಾ ಅಧಿಷ್ಠಿತಮಿತಿ ಶೇಷಃ । ಅನ್ಯಥಾ ''ಪೂರ್ವವೈರಮನುಸ್ಮರನ್'' ಇತಿ ಭಾಗವತವಿರೋಧಾತ್' ಎಂದು 'ರಾಹು ಎಂಬ ಅಸುರನ ಸನ್ನಿಧಾನದಿಂದ ಕೂಡಿದ ಶಿರಸ್ಸು ಗ್ರಹವಾಯಿತು' ಎಂದು ಹೇಳುತ್ತಾರೆ.

೧. ಶ್ರೀವಾದಿರಾಜರು ರಾಹು ಎಂಬ ಅಸುರನಿಂದ ಕೂಡಿದ ತಲೆ ರಾಹುಗ್ರಹ ಎಂದು ಹೇಳುತ್ತಾರೆ. ರಾಹುವಿನ ಶಿರಸ್ಸಿನಲ್ಲಿ ಆವಿಷ್ಟರಾದ ದೇವತೆಗಳು ಕೇತುಗ್ರಹ ಎಂದು ಹೇಳುತ್ತಾರೆ.

೨. ತಾಮ್ರಪರ್ಣೀಆಚಾರ್ಯರೂ 'ರಾಹು ಎಂಬ ಅಸುರನಿಂದ ಕೂಡಿದ ಶಿರಸ್ಸು ಗ್ರಹ' ಎಂದು ಹೇಳುತ್ತಾರೆ.

೩. ವರದರಾಜಾಚಾರ್ಯರು, ಜನಾರ್ದನಭಟ್ಟರು, ಚಟ್ಟಿಆಚಾರ್ಯರು 'ದೇವತೆಗಳಿಂದ ಸಹಿತವಾದ ಶಿರಸ್ಸು ಗ್ರಹವಾಯಿತು' ಎಂದು ಅಭಿಪ್ರಾಯಪಡುತ್ತಾರೆ. ಆದರೆ ಅಲ್ಲಿ ರಾಹುವಿನ ಸನ್ನಿಧಾನ ಇದೆಯೇ ಇಲ್ಲವೇ ಎನ್ನುವ ವಿಷಯದಲ್ಲಿ ಯಾವುದೇ ಮಾತುಗಳನ್ನು ಹೇಳುವದಿಲ್ಲ.

ಇದರಲ್ಲಿ ಇನ್ನೊಂದು ವಿಚಾರಣೀಯವಾದ ಅಂಶ ಇದೆ. ಶ್ರೀವಾದಿರಾಜರು ರಾಹು ಎಂಬ ಅಸುರನಿಗೆ, ಜನಾರ್ದನಭಟ್ಟರು ದೇವತಾವಿಷ್ಟವಾದ ಶಿರಸ್ಸಿಗೆ ಪಾರಿಭಾಷಿಕವಾದ ಗ್ರಹತ್ವವನ್ನು ಮಾತ್ರ ಹೇಳಿದ್ದಾರೆ ಎಂದು ತೋರುತ್ತದೆ. 'ಪರ್ವಣಿ ಪರ್ವಣಿ ಸೂಚಕಯೋಶ್ಚಂದ್ರಸೂರ್ಯಯೋಃ ದ್ವೇಷಮಾತ್ರಾಯ ರಾಹುಃ' ಎಂದು 'ಸೂರ್ಯಚಂದ್ರರನ್ನು ನುಂಗುವ (ಗ್ರಹಿಸುವ) ಮೂಲಕ ದ್ವೇಷ ಸಾಧುಸುವದು ಮಾತ್ರ ರಾಹುವಿನ ಕೆಲಸ' ಎಂದು ಶ್ರೀವಾದಿರಾಜರು ಹೇಳಿದ್ದಾರೆ. 'ಗ್ರಹತಾಂ=ಗೃಹ್ಣಾತಿ ಗ್ರಸತೀತಿ ಗ್ರಹಃ, ತಸ್ಯ ಭಾವಃ ಗ್ರಹತಾ । ಚಂದ್ರಸೂರ್ಯಗ್ರಹತ್ವಮವಾಪ' ಎಂದು ಜನಾರ್ದನಭಟ್ಟರು ಕೂಡ 'ಗ್ರಹತಾಂ= ಚಂದ್ರಸೂರ್ಯರನ್ನು ನುಂಗುವ ಗ್ರಹವಾಯಿತು' ಎಂದು ಹೇಳುತ್ತಾರೆ.

ಇದರ ಅಭಿಪ್ರಾಯ ಇಷ್ಟು. ಶ್ರೀವಾದಿರಾಜರು ಹಾಗು ಜನಾರ್ದನಭಟ್ಟರು ರಾಹುವಿಶಿಷ್ಟವಾದ ಶಿರಸ್ಸಿಗೆ ಗ್ರಹತ್ವವನ್ನು ಒಪ್ಪುತ್ತಾರೆ. ಆದರೆ ಅದು ಪಾರಿಭಾಷಿಕವಾದ ಗ್ರಹತ್ವ. ಎಲ್ಲ ಗ್ರಹಗಳಲ್ಲಿ ಇರುವ, ಪ್ರಸಿದ್ಧವಾದ ಜೀವರ ಶುಭಾಶುಭಕರ್ಮಸೂಚಕತ್ವರೂಪವಾದ ಗ್ರಹತ್ವವಲ್ಲ . ಇಂತಹ ಗ್ರಹತ್ವವನ್ನು ತಮ್ಮ ವ್ಯಾಖ್ಯಾನದಲ್ಲಿ ಹೇಳಿದ್ದು ಕಾಣುವದಿಲ್ಲ. ಈ ಇಬ್ಬರು ವ್ಯಾಖ್ಯಾನಕಾರರು ಮಾತ್ರವಲ್ಲ ಉಳಿದ ಯಾವ ವ್ಯಾಖ್ಯಾನಕಾರರೂ ನವಗ್ರಹಗಳಿಗೆ ಹೇಳುವ ಪ್ರಸಿದ್ಧವಾದ (ಶಬ್ದಕಲ್ಪದ್ರುಮಃ- ಗ್ರಹಃ- ಗೃಹ್ಣಾತಿ ಗತಿವಿಶೇಷಾನಿತಿ, ಯದ್ವಾ ಗೃಹ್ಣಾತಿ ಫಲದಾತೃತ್ವೇನ ಜೀವಾನಿತಿ । ಗ್ರಹ್ (ವಿಭಾಷಾ ಗ್ರಹಃ ಇತಿ ಪಕ್ಷೇ ಅಚ್) ಸೂರ್ಯಾದಿನವ ।) ಶುಭಾಶುಭಕರ್ಮಸೂಚಕತ್ವರೂಪವಾದ ಗ್ರಹತ್ವ ಹೇಳಿಯೇ ಇಲ್ಲ.

ಶ್ರೀಯಾದವಾರ್ಯರ ಶಿಷ್ಯರಾದ ತಿರುಮಲಾರ್ಯಸೂರಿಗಳ ಮಕ್ಕಳಾದ ಪ್ರಹ್ಲಾದಕೃಷ್ಣಾಚಾರ್ಯರು ತಾರತಮ್ಯಸ್ತೋತ್ರಕ್ಕೆ 'ತಾರತಮ್ಯಪಂಚಶ್ಲೋಕೀವಿವೃತಿ' ಎಂಬ ವ್ಯಖ್ಯಾನವನ್ನು ಬರೆದಿದ್ದಾರೆ. ಆ ವ್ಯಾಖ್ಯಾನದಲ್ಲಿ ನವಗ್ರಹಗಳ ಕುರಿತಾಗಿ ಆಲೋಚಿಸಿದ್ದಾರೆ-

ಏವಂ ಮೇಷಾದಿರಾಶಿಸಂಚಾರಿದೇವತಾ ಆದಿತ್ಯಾದಿನವಗ್ರಹಾಃ । ತೇಷು ಆದಿತ್ಯಸೋಮಬೃಹಸ್ಪತಯೋ ನ ಕರ್ಮದೇವಾಃ । ಬ್ರಹ್ಮಾಂಡಮಧ್ಯ ಏವ ಇತ್ಯುಕ್ತಕರ್ಮದೇವಲಕ್ಷಣಾಭಾವಾತ್ । ಕಿಂತು ಮಂಗಲ-ಬುಧ-ಶುಕ್ರ-ಶನಿ-ಕೇತವ ಏವ ಕರ್ಮದೇವಾಃ । ತತ್ರ ಉಕ್ತಕರ್ಮದೇವಲಕ್ಷಣಭಾವಾತ್ । ತಥಾಹಿ-ಪರಮೇಶ್ವರೇಣ ಬ್ರಹ್ಮಾಂಡಮಧ್ಯೇ ಗ್ರಹದೇವತಾ ಉತ್ಪಾದಿತಾ ಇತಿ ತಾವದಂಗೀಕಾರ್ಯಮ್ । ''ಧಾತಾ ಯಥಾ ಪೂರ್ವಂ ಅಕಲ್ಪಯತ್'' ಇತಿ ಶ್ರುತೇಃ । ತಾಸಾಂ ಪೂರ್ವಕಲ್ಪೀಯಗ್ರಹದೇವತಾವತ್ ಶುಕ್ರಮಂಗಲಾದಿವೇದೋಕ್ತನಾಮಾನಿ ಸಂಕೇತಿತವಾನ್ । ತತ್ತದ್ಯೋಗ್ಯರೂಪಾಣಿ ಚ ಉತ್ಪಾದಿತವಾನ್ ಇತ್ಯೇತದ್ ''ಋಷೀಣಾಂ ನಾಮಧೇಯಾನಿ'' ಇತಿ ಪ್ರಾಗುದಾಹೃತಸ್ಮೃತಿಸಿದ್ಧಮ್ । ತತಶ್ಚ ಮಂಗಲಬುಧಾದಯೋ ಗ್ರಹದೇವಾಃ ಬ್ರಹ್ಮಾಂಡಮಧ್ಯ ಏವ ವೇದೋಕ್ತದೇವಸಂಬಂಧನಾಮರೂಪವತ್ವಲಕ್ಷಣಂ ದೇವತ್ವಂ ಪ್ರಾಪ್ತಾ ಇತಿ ತತ್ರ ಕರ್ಮದೇವಲಕ್ಷಣಮಸ್ತೀತಿ ಸಿದ್ಧಮ್ । ತತ್ರ ಶನಿಬುಧೌ ವಕ್ಷ್ಯೇತೇ । ಅತಃ ಶಿಷ್ಟಾಃ ಮಂಗಲಶುಕ್ರರಾಹುಕೇತವಃ ಕರ್ಮದೇವೇಷು ಗ್ರಾಹ್ಯಾಃ ।

ತತ್ರ ಯದ್ಯಪಿ ರಾಹುರ್ದೈತ್ಯ ಇತಿ ಪ್ರಸಿದ್ಧಿಃ । ತಥಾಪಿ ಶಿರಶ್ಛೇದಾನಂತರಂ ದೇವತ್ವಂ ಗ್ರಹತ್ವಂ ಚ ಪ್ರಾಪ್ತಮ್ । ಯಥೋಕ್ತಂ ಭಾಗವತೇ- ''ಶಿರಸ್ತ್ವಮರತಾಂ ನೀತಮಜೋ ಗ್ರಹಮಚೀಕ್ಲೃಪತ್' ಇತಿ(8.8.71) । ಭಾರತತಾತ್ಪರ್ಯನಿರ್ಣಯೇ ಚೋಕ್ತಮ್- 'ಶಿರಸ್ತು ತಸ್ಯ ಗ್ರಹತಾಮವಾಪ ಸುರೈಃ ಸಮಾವಿಷ್ಟಮ್' ಇತಿ । ತತ್ರ ಗ್ರಹತ್ವಂ ಸ್ಪಷ್ಟಮೇವ । ಸುರೈರಿತಿ ಸಹಯೋಗೇ ತೃತೀಯಾ । ಸಮಾವಿಷ್ಟಂ ಸಮಾವೇಶಂ ಪ್ರಾಪ್ತಮ್ । ತೇನ ದೇವತ್ವಂ ಸೂಚಿತಮ್ । ಅನ್ಯಥಾ ಸುರೈಃ ಸಹ ಸಮಾವೇಶಾಯೋಗಾತ್ ಇತಿ ।

ಇತ್ಥಂ ಹಿ ರಾಹು ಕಥಾ- ರಾಹುಃ ಪೂರ್ವಂ ದೇವತಾಚಿಹ್ನಾನಿ ಗೃಹೀತ್ವಾ ದೇವಪಂಕ್ತೌ ಪ್ರವಿಶ್ಯ ಅಮೃತಪಾನಂ ಕೃತವಾನ್ । ತದನಂತರಂ ಚಂದ್ರಾರ್ಕಾಭ್ಯಾಂ ಸೂಚನೇ ಕೃತೇ ಭಗವಾನ್ ತಚ್ಛಿರಶ್ಚಿಚ್ಛೇದ । ತದುಕ್ತಂ ಭಾಗವತೇ(8.8.69.)-

ದೇವಲಿಂಗಪ್ರತಿಚ್ಛನ್ನಃ ಸ್ವರ್ಭಾನುರ್ದೇವಸಂಸದಿ ।
ಪ್ರವಿಶ್ಯ ಸೋಮಮಪಿಬತ್ ಚಂದ್ರಾರ್ಕಾಭ್ಯಾಂ ಚ ಸೂಚಿತಃ ॥ ಇತಿ ।

ಏವಂ ರಾಹುಣಾ ಅಮೃತಂ ಪೀತಮಿತಿ ಚಂದ್ರಾರ್ಕಾಭ್ಯಾಂ ಸೂಚನೇ ಕೃತೇ ಭಗವಾನ್ ತಚ್ಛಿರಶ್ಚಿಚ್ಛೇದ । ತಚ್ಛಿರೋ ಭಗವತ್ಪ್ರಸಾದೇನ ಗ್ರಹತ್ವಂ ಚ ಪ್ರಾಪ । ತದುಕ್ತಂ 'ಶಿರಸ್ತ್ವಮರತಾಂ ನೀತಮಜೋ ಗ್ರಹಮಚೀಕ್ಲೃಪತ್' ಇತಿ । ಅತೋ ಭಗವತ್ಪ್ರಸಾದೇನ ದೇವತ್ವಸ್ಯ ಪ್ರಾಪ್ತತ್ವಾತ್ ತಚ್ಛಿರಃ ದೇವಪಂಕ್ತೌ ಪ್ರಕಟಂ ಯಥಾ ಸ್ಯಾತ್ ತಥಾ ಉಪವಿಷ್ಟಮಿತಿ । ತಸ್ಮಾತ್ 'ಸುರೈಃ ಸಮಾವಿಷ್ಟಮ್' ಇತ್ಯಸ್ಯೋಕ್ತಮೇವ ವ್ಯಾಖ್ಯಾನಂ ಯುಕ್ತಮ್ ।

ಕೇತುರಪ್ಯತ್ರ ಗ್ರಾಹ್ಯಃ । ತಸ್ಯಾಪಿ ಉಕ್ತಕರ್ಮದೇವಲಕ್ಷಣಾಕ್ರಾಂತತ್ವಾತ್ ।

ಯಸ್ಯ ಯಸ್ಮಾದ್ ಯದಾ ದುಃಖಂ ಸ ತಂ ಯತ್ನೇನ ಪೂಜಯೇತ್ ।
ಬ್ರಹ್ಮಣೈಷಾಂ ವರೋ ದತ್ತಃ ಪೂಜಿತಾಃ ಪೂಜಯಿಷ್ಯಥ ॥

ಗ್ರಹಾಧೀನಾ ನರೇಂದ್ರಾಣಾಂ ಉಚ್ಛ್ರಾಯಾಃ ಪತನಾನಿ ಚ ।
ಭಾವಾಭಾವೌ ಚ ಜಗತಃ ತಸ್ಮಾತ್ ಪೂಜ್ಯತಮಾ ಗ್ರಹಾಃ ॥

ಇತಿ ಗ್ರಹಾಣಾಂ ಪೂಜ್ಯತ್ವಶ್ರವಣಾತ್ । ನ ಚ ದೇವವ್ಯತಿರಿಕ್ತಾನಾಂ ಪೂಜ್ಯತ್ವಮಸ್ತಿ । ಕಿಂಚ 'ಪೂಜಿತಾಃ ಪೂಜಯಿಷ್ಯಥ' ಇತ್ಯನೇನ ಯೂಯಮನ್ಯೈರ್ನರೇಂದ್ರಾದಿಭಿಃ ಪೂಜಿತಾಃ ಪೂಜಯಿಷ್ಯಥ, ಹರಿಮಿತಿ ಯೋಗ್ಯತಯಾ ಅಧ್ಯಾಹಾರ್ಯಮ್ । ಇತಿ ಬ್ರಹ್ಮಣಾ ಗ್ರಹಾಣಾಂ ಹರಿಪೂಜಕತ್ವಮುಕ್ತಮ್ । ನ ಚಾಸುರಾದೀನಾಂ ತದಸ್ತಿ । ಅತೋಽಪಿ ಕೇತೋರ್ದೇವತ್ವಮೇವ । ಅನ್ಯಥಾ ದೇಹಸಾಹಚರ್ಯವಿರೋಧಾಚ್ಚ । ಅತ್ರ ಗ್ರಹಶಬ್ದೇನ ಸೂರ್ಯಾದಯಃ ಕೇತ್ವಂತಾ ಗ್ರಾಹ್ಯಾಃ ।

ಸೂರ್ಯಃ ಸೋಮೋ ಮಹೀಪುತ್ರೋ ಬುಧಶ್ಚೈವ ಬೃಹಸ್ಪತಿಃ ।
ಶುಕ್ರಃ ಶನೈಶ್ಚರೋ ರಾಹುಃ ಕೇತುಶ್ಚೇತಿ ಗ್ರಹಾಃ ಸ್ಮೃತಾಃ ॥

ಇತಿ ಪೂರ್ವವಾಕ್ಯೇ ತೇಷಾಮೇವ ಪ್ರಕೃತತ್ವಾದಿತಿ ।

ಹೀಗೆ ಪ್ರಹ್ಲಾದಕೃಷ್ಣಾಚಾರ್ಯರು ರಾಹು-ಕೇತುಗಳು ಕರ್ಮಜದೇವತೆಗಳು ಎಂದು ಗಟ್ಟಿಯಾಗಿ ಸಮರ್ಥಿಸಿದ್ದಾರೆ. ಅವರು ನೀಡುವ ಯುಕ್ತಿಗಳು ಈ ರೀತಿಯಾಗಿ ಇವೆ -

೧. ಭಗವಂತನ ಅನುಗ್ರಹದಿಂದ ರಾಹು ಎಂಬ ಅಸುರನಿಗೆ 'ದೇವತ್ವವು' ಬಂದಿದೆ.

೨. ಆಚಾರ್ಯರು ತಾತ್ಪರ್ಯನಿರ್ಣಯದಲ್ಲಿ 'ಸುರೈಃ ಸಮಾವಿಷ್ಟಮ್' ಎಂಬುದಾಗಿ 'ರಾಹು ದೇವತೆಗಳ ಜೊತೆಯಲ್ಲಿ ಒಂದೇ ಶಿರಸ್ಸಿನಲ್ಲಿ ಕೂಡಿ ಇದ್ದ ' ಎಂದು ಹೇಳಿದ್ದಾರೆ. ರಾಹುವು ಅಸುರನಾಗಿದ್ದರೆ ದೇವತೆಗಳ ಜೊತೆಯಲ್ಲಿ ಇರುವುದು ಅಸಂಭಾವಿತ. ರಾಹುವು ದೇವತೆಗಳ ಜೊತೆಯಲ್ಲಿ ಇದ್ದಾನೆ ಎಂದು ಆಚಾರ್ಯರು ಹೇಳಿದ್ದಾರೆ. ಆದ್ದರಿಂದಲೂ ರಾಹುವು ದೇವತೆ ಎಂದು ಪರಿಗಣಿಸಬೇಕು.

೩. ಅಗ್ನಿಪುರಾಣದಲ್ಲಿ 'ಪೂಜ್ಯತಮಾ ಗ್ರಹಾಃ' ಎಂದು ಗ್ರಹಗಳಿಗೆ ಪೂಜ್ಯತ್ವವನ್ನು ಹೇಳಿದ್ದಾರೆ. ಪೂಜ್ಯತ್ವವು ದೈತ್ಯರಿಗೆ ಕೊಡುವದಿಲ್ಲ. ಆದ್ದರಿಂದ ಪೂಜ್ಯರೆಂದು ಕರೆಸಿಕೊಂಡ ರಾಹು-ಕೇತುಗಳು ದೇವತೆಗಳು.

೪. ಅಗ್ನಿಪುರಾಣದಲ್ಲಿಯೇ 'ಪೂಜಯಿಷ್ಯಥ (ಹರಿಮ್)' ಎಂದು ಹರಿಪೂಜಕತ್ವವನ್ನು ಹೇಳಿದ್ದಾರೆ. ಅಸುರರು ಹರಿಯನ್ನು ಪೂಜಿಸುವದು ಅಸಂಭಾವಿತ. ಆದ್ದರಿಂದ ಹರಿಪೂಜಕರಾದ ರಾಹು-ಕೇತುಗಳು ದೇವತೆಗಳು.

ಹೀಗೆ ಪ್ರಹ್ಲಾದಕೃಷ್ಣಾಚಾರ್ಯರು ನಾಲ್ಕು ಕಾರಣಗಳಿಂದ ರಾಹು-ಕೇತುಗಳು ದೇವತೆಗಳು (ಕರ್ಮಜದೇವತೆಗಳು) ಎಂದು ಸಮರ್ಥಿಸಿದ್ದಾರೆ.

### ವ್ಯಾಖ್ಯಾನಕಾರರ ಆಕೂತ

ತಾತ್ಪರ್ಯನಿರ್ಣಯದ ವ್ಯಾಖ್ಯಾನಕಾರರ ಮಾತುಗಳನ್ನು ನೋಡಿದಾಗ ಈ ಅಭಿಪ್ರಾಯ ಮೂಡಿಬರುತ್ತದೆ. ರಾಹು ಎಂಬ ಅಸುರನಿಗೆ ನಿಜವಾದ ಗ್ರಹತ್ವ ಇಲ್ಲವೇ ಇಲ್ಲ. ರಾಹುವಿನ ಶಿರಸ್ಸಿನಲ್ಲಿ ಪ್ರವೇಶಿಸಿದ ದೇವತೆಗಳೇ ಮುಖ್ಯವಾಗಿ ಗ್ರಹರು. ಯಾಜ್ಞಿಕರು ಯಜ್ಞದಲ್ಲಿ ನೀಡುವ ಆಹುತಿಯನ್ನು ಸ್ವೀಕರಿಸುವ ಅಧಿಕಾರ, ಜೀವರಾಶಿಗಳ ಪ್ರಾಚೀನವಾದ ಶುಭಕರ್ಮ, ಅಶುಭಕರ್ಮ ಸೂಚಿಸುವ ಅಧಿಕಾರ ಇವೆಲ್ಲ ದೇವತೆಗಳಿಗೆ ಮಾತ್ರ ಮೀಸಲು. ಆದ್ದರಿಂದ ಈ ಅರ್ಥದಲ್ಲಿ ರಾಹುವಿಗೆ ಎಲ್ಲಿಯೇ ಗ್ರಹತ್ವ ಹೇಳಿದ್ದರೂ ಅದು ರಾಹುವಿನ ಶಿರಸ್ಸಿನಲ್ಲಿರುವ ದೇವತೆಗಳಿಗೆ ಎಂದು ತಿಳಿಯಬೇಕು. ಚಂದ್ರಸೂರ್ಯರನ್ನು ಗ್ರಹಿಸುವುದು=ನುಂಗುವುದು ಎಂಬ ಅರ್ಥದಲ್ಲಿ ರಾಹುದೈತ್ಯನಿಗೆ ಗ್ರಹತ್ವವನ್ನು ಹೇಳುವದಕ್ಕೆ ಯಾವ ಸಮಸ್ಯೆಗಳು ಇಲ್ಲ ಎಂದು ತೋರುತ್ತದೆ. ಇನ್ನು ಈ ಔಪಚಾರಿಕವಾದ ಗ್ರಹತ್ವವೂ ಯಾದವಾರ್ಯರು 'ರಾಹುವಿಗೆ ಚಂದ್ರಸೂರ್ಯರನ್ನು ಗ್ರಹಿಸುವ ಸಾಮರ್ಥ್ಯ ಭಗವಂತನ ವರದಿಂದ ಬರುತ್ತದೆ. ಅದೂ ತಾತ್ಕಾಲಿಕವಾಗಿ ಎಂದು ಹೇಳುತ್ತಾರೆ-

**ಯೋ ರಾಹುಃ ಪರ್ವಣಿ ಸೂರ್ಯಚಂದ್ರಮಸೌ ಅಭಿಧಾವತೀತ್ಯನ್ವಯಃ । ಪರ್ವಕಾಲ ಏವ ತಸ್ಯ ತಾದೃಶಂ ಸಾಮರ್ಥ್ಯಮಾಯಾತಿ ನಾನ್ಯದೇತ್ಯಾಶಯಃ ।...ಭಾಗ.5.23.2.**

### ನಿರ್ಣಯದ ವ್ಯಾಖ್ಯಾನಗಳ ಪ್ರಕಾರ-

೧. ರಾಹುವಿನ ಹೆಸರಿನಿಂದ ನೀಡುವ ಯಜ್ಞಾಹುತಿಸ್ವೀಕರಿಸುವ ಅಧಿಕಾರ- ದೇವತಗಳಿಗೆ ಮಾತ್ರ.

೨. ಜೀವರ ಶುಭಾಶುಭಕರ್ಮಸೂಚಿಸುವ ಅಧಿಕಾರ- ದೇವತೆಗಳಿಗೆ ಮಾತ್ರ.

೩. ಚಂದ್ರಸೂರ್ಯರನ್ನು ಗ್ರಹಿಸುವದು=ನುಂಗುವುದು- ದೇವತೆಗಳ ಸನ್ನಿಧಾನದಿಂದ ಕೂಡಿದ ರಾಹುವಿಗೆ.

### ಪ್ರಹ್ಲಾದಕೃಷ್ಣಾಚಾರ್ಯರ ಪ್ರಕಾರ-

೧. ರಾಹುವಿನ ಹೆಸರಿನಿಂದ ನೀಡುವ ಯಜ್ಞಾಹುತಿಸ್ವೀಕರಿಸುವ ಅಧಿಕಾರ- ರಾಹು-ಕೇತುಗಳಿಗೆ.

೨. ಜೀವರ ಶುಭಾಶುಭಕರ್ಮಸೂಚಿಸುವ ಅಧಿಕಾರ- ರಾಹು-ಕೇತುಗಳಿಗೆ.

೩. ಚಂದ್ರಸೂರ್ಯರನ್ನು ಗ್ರಹಿಸುವದು=ನುಂಗುವುದು- ರಾಹು-ಕೇತುಗಳಿಗೆ.

**ರಾಹು-ಕೇತುಗಳಿಗೆ ಸಂಬಂಧಿಸಿದ ಪುರಾಣವಚನಗಳು ಹಾಗು ಜ್ಯೋತಿಷಗ್ರಂಥಗಳು.**

ರಾಹು-ಕೇತುಗಳಿಗೆ ಸಂಬಂಧಿಸಿದ ಹಾಗೆ ಪುರಾಣಗಳಲ್ಲಿ ಹಾಗು ಜ್ಯೋತಿಷ್ಯಗ್ರಂಥಗಳಲ್ಲಿ ಅನೇಕ ಅಭಿಪ್ರಾಯಗಳು ಕಂಡುಬರುತ್ತವೆ. ಭಾಗವತಪುರಾಣದಲ್ಲಿ ಬಂದ ಮಾತುಗಳನ್ನು ಹಿಂದೆ ನೋಡಿದ್ದೇವೆ. ಅದರಂತೆ ವಿಷ್ಣುಧರ್ಮೋತ್ತರಪುರಾಣದಲ್ಲಿ ಬಂದ ವಚನಗಳನ್ನು ನೋಡೋಣ -

**ಲಭೇಯಾತಾಂ ಹಿ ಸೋಮಾರ್ಕೌ ಮತ್ತೋ ದೇವ ಪರಾಭವಮ್ ।**
**ಪೂಜಾಂ ಚ ಪ್ರಾರ್ಥಯೇ ಲೋಕಾತ್ ಗ್ರಹತ್ವಂ ಚ ಜನಾರ್ದನ ॥**

**ಏವಮುಕ್ತಃ ಸ ಭಗವಾನ್ ಮಾಮುವಾಚ ತದಾ ಹರಿಃ ।**
**ಗ್ರಹತ್ವಂ ಭವಿತಾ ದೈತ್ಯ ಪೂಜಾಂ ಚೈವೋಪಲಪ್ಸ್ಯಸೇ ॥**
**ಪರ್ವಕಾಲೇ ತು ಸಂಪ್ರಾಪ್ತೇ ಚಂದ್ರಾರ್ಕೌ ಛಾದಯಿಷ್ಯಸಿ ॥ 1.42.40-41 ।**

'ರಾಹು ವಿಷ್ಣುವಿನಿಂದ ಚಂದ್ರಸೂರ್ಯರನ್ನು ಸೋಲಿಸುವ ಅರ್ಥಾತ್ ನುಂಗುವ ವರವನ್ನು, ಜನರಿಂದ ಪೂಜ್ಯನಾಗಬೇಕೆಂಬ ವರವನ್ನು, ಗ್ರಹನಾಗಬೇಕೆಂಬ ವರವನ್ನು ಪ್ರಾರ್ಥಿಸುತ್ತಾನೆ. ಅವನ ಪ್ರಾರ್ಥನೆಗೆ ಅನುಗುಣವಾಗಿ ಭಗವಂತನು ಆ ವರಗಳನ್ನು ಕೊಡುತ್ತಾನೆ.'

ಮೇಲಿನ ವಚನಗಳು ಪ್ರಹ್ಲಾದಕೃಷ್ಣಾಚಾರ್ಯರ ಅಭಿಪ್ರಾಯವನ್ನು ಸಮರ್ಥಿಸುತ್ತವೆ.

**ಬೃಹತ್ಸಂಹಿತಾ ಭಟ್ಟೋತ್ಪಲವ್ಯಾಖ್ಯಾಯುತಾ**

ಬೃಹತ್ಪರಾಶರ ಹಾಗು ಭಟ್ಟೋತ್ಪಲರ ವ್ಯಾಖ್ಯಾನಗಳಲ್ಲಿ ರಾಹು-ಕೇತುಗಳ ಕುರಿತಾಗಿ ಕೆಲವು ವಿಚಾರಗಳನ್ನು ಹೇಳಿದ್ದಾರೆ.

**ತತ್ರಾದಾವೇವ ರಾಹೋರ್ಗ್ರಹತ್ವಪ್ರತಿಪಾದನಾಯ ಮತಾಂತರಮಾಹ-**

**ಅಮೃತಾಸ್ವಾದವಿಶೇಷಾತ್ ಛಿನ್ನಮಪಿ ಶಿರಃ ಕಿಲಾಸುರಸ್ಯೇದಮ್ ।**
**ಪ್ರಾಣೈರಪರಿತ್ಯಕ್ತಂ ಗ್ರಹತಾಂ ಯಾತಂ ವದಂತ್ಯೇಕೇ ॥**

**ಕಿಲಶಬ್ದಃ ಆಗಮಪ್ರದರ್ಶನಾರ್ಥಃ । ಏಕೇ ಕೇಚಿದಾಚಾರ್ಯಾ ಏವಂ ವದಂತಿ ಕಲ್ಪಯಂತಿ । ಲೋಕೇ ಯೋ ರಾಹುರಿತ್ಯುಚ್ಯತೇ ಸ ಚಾಸುರಃ ಸೈಂಹಿಕೇಯಃ । ತಸ್ಯ ಪುರಾಮೃತಂ ಪಿಬತೋ ಭಗವತಾ ಹರಿಣಾ ಸುದರ್ಶನಾಖ್ಯೇನ ಚಕ್ರೇಣ ಶಿರೋ ಮೂರ್ಧಾ ಛಿನ್ನಂ ನಿಕೃತ್ತಮಪಿ ಅಮೃತಾಸ್ವಾದವಿಶೇಷಾತ್ ಅಮೃತಾಸ್ವಾದಹೇತೋಃ ಪ್ರಾಣೈರಸುಭಿರಪರಿತ್ಯಕ್ತಂ ನೋಜ್ಝಿತಂ ಗ್ರಹತಾಂ ಯಾತಂ ತದೇವ ಗ್ರಹತ್ವಂ ಪ್ರಾಪ್ತಮಿತಿ । ತಥಾ ಚ ಪುರಾಣಕಾರಃ-**

**ಸಿಂಹಿಕಾತನಯೋ ರಾಹುರಪಿಬಚ್ಚಾಮೃತಂ ಪುರಾ ।**
**ಶಿರಚ್ಛಿನ್ನೋಽಪಿ ನ ಪ್ರಾಣೈಃ ತ್ಯಕ್ತೋಽಸೌ ಗ್ರಹತಾಂ ಗತಃ ॥**

ಯದ್ಯೇವಂ ವಿಧೋ ರಾಹುಃ ತತ್ಕಿಮಿತ್ಯಾಕಾಶೇ ಗ್ರಹವನ್ನೋಪಲಭ್ಯತೇ ತದರ್ಥಮಾಹ-

ಇಂದ್ವರ್ಕಮಡಲಾಕೃತಿರಸಿತತ್ವಾತ್ ಕಿಲ ನ ದೃಶ್ಯತೇ ಗಗನೇ ।
ಅನ್ಯತ್ರ ಪರ್ವಕಾಲಾತ್ ವರಪ್ರದಾನಾತ್ ಕಮಲಯೋನೇಃ ॥

ಇಂದುಮಂಡಲಸ್ಯ ಚಂದ್ರಬಿಂಬಸ್ಯಾರ್ಕಮಂಡಲಸ್ಯ ಸೂರ್ಯಬಿಂಬಸ್ಯ ಚ ಯಾದೃಶ್ಯಾಕೃತಿರಾಕಾರಃ ತಾದೃಗೇವ ರಾಹುಮಂಡಲಸ್ಯ । ಯದ್ಯೇವಂ ತತ್ ಕಿಮಿತಿ ಗಗನೇ ಆಕಾಶೇ ನ ದೃಶ್ಯತೇ ನೋಪಲಭ್ಯತೇ? ಅಸಿತತ್ವಾತ್ ಕಿಲೇತಿ, ಅಸಿತತ್ವಾತ್ ಕೃಷ್ಣತ್ವಾತ್ ಕಿಲ ನ ದೃಶ್ಯತೇ ಯತೋಽಸೌ ತಮೋಮಯ ಇತಿ । ಯದಿ ನ ದೃಶ್ಯತೇ ತದಾಸ್ಯ ದರ್ಶನಮಸ್ತೀತ್ಯಾಹ- ಅನ್ಯತ್ರ ಪರ್ವಕಾಲಾದಿತಿ । ಕಮಲಯೋನೇಃ ಬ್ರಹ್ಮಣೋ ವರಪ್ರದಾನಾತ್ ಪರ್ವಕಾಲಾದ್ ಗ್ರಹಣಸಮಯಾದನ್ಯತ್ರ ಅನ್ಯಸ್ಮಿನ್ ಕಾಲೇ ನ ದೃಶ್ಯತೇ, ಪರ್ವಕಾಲೇ ತು ಪುನಃ ದೃಶ್ಯತೇ । ತಥಾ ಚ ಪರಾಶರಃ-

ಪುರಾ ಪುರುಹೂತಪಿತರಂ ಕಶ್ಯಪಮಪತ್ಯಾರ್ಥಂ ಅಕಾಲೇ ಸಿಂಹಿಕಾ ಅಭಿಯಾಚಯಾಮಾಸ । ತಸ್ಯೈ ಮುನಿಃ ಅಕಾಲಯಾಂಚಾಕೋಪಾದ್ದಾರುಣಂ ಯಮಕಾಲಾಂತಕೋಪಮಂ ಸುತಮದಾತ್, ಯಂ ರಾಹುಮಿತ್ಯಾಚಕ್ಷತೇ ಕುಶಲಾಃ । ಸ ಜಾತಮಾತ್ರ ಏವ ಅದಿತಿಸುತಸಂಗರ-ಅವಮರ್ದನಾತ್ ಅನು ವಿಮುಖೀಕೃತಃ ಕ್ರೋಧಾತ್ ಹಿಮವತಿ ದಿವ್ಯಮತ್ಯುಗ್ರಂ ಅಯುತಂ ವರ್ಷಾಣಾಂ ತಪೋಽತಪ್ಯತ । ಸ ಪಿತಾಮಹಾದ್ದಿವಿ ಚರಣಮಮರತಾಂ ಸುರವಿಜಯಂ ಅರ್ಕಚಂದ್ರಸಂಭಂಕ್ಷಣಂ ಚ ವರಮಭಿವರಯಾಮಾಸ । ತಸ್ಮೈ ಭಗವಾನಮರಗುರುಃ ಸ್ವಯಂಭೂಃ ಪ್ರಹಸನ್ನುವಾಚ । ಅತಿವರಮಶಕ್ತಸ್ತ್ವಮೇತೌ ಜರಯಿತುಂ ಕಿಂತು ಏವಮಿತ್ಯುಕ್ತ್ವಾ ಅಂತರ್ಹಿತೇ ಭಗವತಿ ದಿನಕರರಜನಿಕರೌ ಅಭಿದುದ್ರಾವ ರಾಹುಃ । ತತೋ ಹರಿಃ ಅರಿವಿಮಥನಂ ಚಕ್ರಂ ಉಪರಿ ಪ್ರಕ್ಷಿಪ್ಯಾಸ್ಯ ಶಿರಶ್ಛಿತ್ವೋವಾಚ । ಸರ್ವಮವಿತಥಂ ಪಿತಾಮಹವಚೋ ಭವತು ಸ್ವೇ ಸ್ವೇ ಯುಗೇ ಪರ್ವಣಿ ಗ್ರಹಣಂ ಕುರ್ವನ್ ಜಗತಃ ಶುಭಾಶುಭಾನಾಂ ಕರ್ತಾ ಭವಿಷ್ಯಸೀತಿ ॥

ಅನ್ಯದಪಿ ಮತಾಂತರಮಾಹ-

ಮುಖಪುಚ್ಛವಿಭಕ್ತಾಂಗಂ ಭುಜಂಗಮಾಕಾರಮುಪದಿಶಂತ್ಯನ್ಯೇ ।
ಕಥಯಂತ್ಯಮೂರ್ತಮಪರೇ ತಮೋಮಯಂ ಸೈಂಹಿಕೇಯಾಖ್ಯಮ್ ॥3॥

ಏಕೇ ಆಚಾರ್ಯಾಃ ಸೈಂಹಿಕೇಯಾಖ್ಯಂ ರಾಹುಂ ಮುಖಪುಚ್ಛವಿಭಕ್ತಾಂಗಂ ಉಪದಿಶಂತಿ ಕಥಯಂತಿ । ಮುಖಪುಚ್ಛಾಭ್ಯಾಂ ವಿಭಕ್ತಾನಿ ಅಂಗಾನಿ ಯಸ್ಯ , ಏತದೇವಾಸ್ಯ ಜ್ಞಾಯತೇ ನಾನ್ಯದವಯವಾದಿಕಂ ಮುಖಪುಚ್ಛಾಭ್ಯಾಂ ಪರತಃ । ತಥಾ ಚ ವೀರಭದ್ರಃ-

ಸಿಂಹಿಕಾತನಯಸ್ಯಾಸ್ಯ ರಾಹೋಃ ಪುಚ್ಛಮುಖಾದೃತೇ ।
ನಾನ್ಯದಸ್ತಿ ಪರಂ ಬಾಹುಕಟಿಪಾದಕರಾದಿಕಮ್ ॥ ಇತಿ ॥

ಭುಜಂಗಮಾಕಾರಮುಪದಿಶಂತ್ಯನ್ಯೇ । ಅನ್ಯೇ ಆಚಾರ್ಯಾಃ ಭುಜಂಗಮಾಕಾರಂ ಸರ್ಪಾಕೃತಿಂ ಚ ವದಂತಿ ಕಥಯಂತಿ । ಯಥಾ ಸರ್ಪರೂಪೋ ರಾಹುಃ । ತಥಾ ಚ ವಸಿಷ್ಠಃ-

ಭಷಟ್ಕಾಂತರಿತೋ ರಾಹುಃ ಸೂರ್ಯಾಚಂದ್ರಮಸಾವುಭೌ ।
ಛಾದಯತ್ಯುರಗಾಕಾರೋ ವರದಾನಾತ್ ಸ್ವಯಂಭುವಃ ॥ ಇತಿ ॥

ಕಥಯಂತ್ಯಮೂರ್ತಮಪರ ಇತಿ । ಅಪರೇ ಅನ್ಯೇ ಪುನರಮೂರ್ತಂ ಮೂರ್ತಿರಹಿತಂ ತಮೋಮಯಂ ಅಂಧಕಾರಮಯಂ ರಾಹುಂ ಕಥಯಂತಿ ವದಂತಿ । ತಥಾ ಚ ದೇವಲಃ-

ಅಂಧಕಾರಮಯೋ ರಾಹುಃ ಮೇಘದಂಡ ಇವೋತ್ಥಿತಃ ।
ಆಚ್ಛಾದಯತಿ ಸೋಮಾರ್ಕೌ ಪರ್ವಕಾಲೇ ಹ್ಯುಪಸ್ಥಿತೇ ॥ ಇತಿ ॥ 3 ॥ ಅಧ್ಯಾಯ.5.

ಮೇಲೆ ಉದಾಹರಿಸಿದ ಜ್ಯೋತಿಷಗ್ರಂಥದಲ್ಲಿ ಭಟ್ಟೋತ್ಪಲರು- 'ಅತಿವರಮಶಕ್ತಸ್ತ್ವಮೇತೌ ಜರಯಿತುಂ ಕಿಂತು ಏವಮಿತ್ಯುಕ್ತ್ವಾ ಅಂತರ್ಹಿತೇ ಭಗವತಿ ದಿನಕರರಜನಿಕರೌ ಅಭಿದುದ್ರಾವ ರಾಹುಃ । ತತೋ ಹರಿಃ ಅರಿವಿಮಥನಂ ಚಕ್ರಂ ಉಪರಿ ಪ್ರಕ್ಷಿಪ್ಯಾಸ್ಯ ಶಿರಶ್ಛಿತ್ತ್ವೋವಾಚ । ಸರ್ವಮವಿತಥಂ ಪಿತಾಮಹವಚೋ ಭವತು ಸ್ವೇ ಸ್ವೇ ಯುಗೇ ಪರ್ವಣಿ ಗ್ರಹಣಂ ಕುರ್ವನ್ ಜಗತಃ ಶುಭಾಶುಭಾನಾಂ ಕರ್ತಾ ಭವಿಷ್ಯಸೀತಿ ॥' ಎಂಬ ಮಾತುಗಳಿಂದ 'ಚಂದ್ರಸೂರ್ಯರನ್ನು ಗ್ರಹಿಸುವುದು' 'ಜೀವರಾಶಿಗಳ ಶುಭಾಶುಭಸೂಚಕತ್ವ'ಗಳನ್ನು ಬ್ರಹ್ಮದೇವರು ವರವಾಗಿ ಕೊಟ್ಟಿದ್ದನ್ನು ಶ್ರೀಹರಿಯು 'ಹಾಗೇ ಆಗಲಿ' ಎನ್ನುವ ಮೂಲಕ ಅನುಮೋದಿಸಿದ್ದನ್ನು ಹೇಳುತ್ತಾರೆ.

**೫. ರಾಹುವಿನ ಶಿರಸ್ಸು ಹಾಗೂ ಕಬಂಧಗಳಲ್ಲಿ ಯಾವುದು ರಾಹು ಗ್ರಹ? ಯಾವುದು ಕೇತು ಗ್ರಹ?**

ವಾದಿರಾಜೀಯಾ- ತಯೋರ್ಮಧ್ಯೇ ಶಿರಸಿ 'ರಾಹುರ್ಜ್ಯೇಷ್ಠಂ ಕೇತುಶತಮ್'(ಭಾಗ.6.6.36) ಇತಿ ವಚನಾತ್' ರಾಹೋರಪೀಷತ್ಸನ್ನಿಧಾನಂ ದೇವಾನಾಂ ಶತಸ್ಯ ಚ ಸನ್ನಿಧಾನಮ್ । ತತ್ರಾಪಿ ಶಿರೋಽಭಿಮಾನಿತ್ವಾತ್ ರಾಹೋರಂಶಸ್ಯ ಜ್ಯೇಷ್ಠತಾ ಕೇತೂನಾಂ ಕನಿಷ್ಠತಾ । ಏವಂ ಗ್ರಹದ್ವಯಸ್ಯಾಪಿ ಏಕಂ ಶಿರ ಏವ ಅಧಿಷ್ಠಾನಮ್ । ಅತ ಏವ 'ಕರೇ ಪ್ರಾಸ್ಯ ಶಿರೋ ಜಹಾರ' ಇತ್ಯುಕ್ತಮ್ ।''

ರಾಹುವಿನ ಶಿರಸ್ಸಿನಲ್ಲಿ ಅದಕ್ಕೆ ಮುಖ್ಯಾಭಿಮಾನಿಯಾದ್ದರಿಂದ ರಾಹು ಜ್ಯೇಷ್ಠನಾಗಿ ಸ್ವಲ್ಪ ಸನ್ನಿಧಾನ ಪಡೆದಿದ್ದಾನೆ. ಹೀಗಾಗಿ ರಾಹು-ಕೇತು ಎಂಬ ಎರಡು ಗ್ರಹಗಳಿಗೂ ರಾಹುವಿನ ಶಿರಸ್ಸೇ ಅಧಿಷ್ಠಾನ. ಹೊರತು ಕಬಂಧ ಕೇತುವಲ್ಲ ಎಂದು ವಾದಿರಾಜರ ಅಭಿಪ್ರಾಯ.

ಚಟ್ಟೀಟಿಪ್ಪಣೀ - 'ತಸ್ಯ ರಾಹೋಃ ಶಿರಃ ಸುರೈರ್ದೇವೈಃ ಸಮಾವಿಷ್ಟಂ ಸತ್ ಗ್ರಹತಾಂ **ಕೇತ್ವಾಖ್ಯಗ್ರಹತಾಮಾಪ** । ...ಕಂಠೇನ ವಕ್ಷಃಶಿರಸೋರತಿಸಾಮೀಪ್ಯಾತ್ ಕಂಠಗತಾಮೃತಸಂಬಂಧಃ ಉಭಯೋಸ್ತಿಷ್ಠತಿ ಯಸ್ಮಾತ್ ತಸ್ಮಾತ್ ಶಿರೋ ಗ್ರಹತಾಮವಾಪ **ಕಬಂಧರೂಪೋ ರಾಹುರದ್ಯಾಪಿ** ಜೀವತೀತಿ ಭಾವಃ'

ಚಟ್ಟಿಟಿಪ್ಪಣಿಯ ಪ್ರಕಾರ 'ದೇವತೆಗಳ ಸನ್ನಿಧಾನದಿಂದ ಕೂಡಿದ ಶಿರಸ್ಸು' 'ಕೇತು' ಎಂಬ ಗ್ರಹ. ಕಬಂಧವೇ ರಾಹುಗ್ರಹ.

ವಂಶೀಧರರು -''ಕಬಂಧೋಽಪತದಿತಿ ॥ ಕೇತುಸ್ತು ಛಾಯಾರೂಪೋ ಗ್ರಹೋ ನ ತು ಕಬಂಧರೂಪಃ । ''ರಾಹೋಶ್ಛಾಯಾ ಸ್ಮೃತಃ ಕೇತುಃ'' ಇತಿ ಭುವನದೀಪಿಕೋಕ್ತೇಃ॥'' ಇತಿ ವಂಶೀಧರಃ

ಜೀವಗೋಸ್ವಾಮೀ -''॥ ಕಬಂಧೋಽಪತದಿತಿ ॥ ಕೇತುಸ್ತು ಛಾಯಾಗ್ರಹ ಏವ । ನ ತು ಕಬಂಧರೂಪ ಇತ್ಯಭಿಪ್ರಾಯಃ'

ಭಾಗವತಕ್ಕೆ ವ್ಯಾಖ್ಯಾನವನ್ನು ಬರೆದ ವಂಶೀಧರರು ಹಾಗು ಜೀವಗೋಸ್ವಾಮಿ ಇವರಿಬ್ಬರೂ ಕೇತುವು ಛಾಯಾಗ್ರಹವೇ ಹೊರತು ಕಬಂಧರೂಪವಲ್ಲ ಎಂದು ಹೇಳುತ್ತಾರೆ.

ಪೀಯೂಷಧಾರಾಟಿಪ್ಪಣೀ - ''.....ರಾಹೋರಧಃಶರೀರಭಾಗಃ ಕೇತುಸಂಜ್ಞಃ ಇತಿ ಪುರಾಣಪ್ರಸಿದ್ಧಮ್ ।''

ಪಿಯೂಷಧಾರಾಕಾರರು ರಾಹುವಿನ ಕಬಂಧ ಕೇತುಗ್ರಹ ಎಂದು ಹೇಳುತ್ತಾರೆ.

ಹೀಗೆ ಈ ರೀತಿ ಆಚಾರ್ಯರ ಅನುಯಾಯಿಗಳು ಹಾಗೂ ಇತರ ಪ್ರಬಂಧಕಾರರು ರಾಹು-ಕೇತುಗಳ ವಿಷಯದಲ್ಲಿ ಭಿನ್ನ ಭಿನ್ನವಾದ ಅಭಿಪ್ರಾಯಗಳನ್ನು ಹೊಂದಿದ್ದಾರೆ.

**೬.'ಕೇತುಶತಮ್' ಇವರು ದೇವತೆಗಳೇ ಅಥವಾ ಅಸುರರೇ?**

ಭಾಗವತದಲ್ಲಿ ಬಂದ 'ರಾಹುಜ್ಯೇಷ್ಠಂ ಕೇತುಶತಮ್' ಎನ್ನುವಲ್ಲಿರುವ 'ಕೇತುಶತಗಳನ್ನೇ' ಆಚಾರ್ಯರು 'ಸುರೈಃ ಸಮಾವಿಷ್ಟಮ್' ಎಂಬುವಲ್ಲಿ ಸುರ ಎಂಬ ಶಬ್ದದಿಂದ ಸಂಗ್ರಹಿಸಿದ್ದಾರೆಯೇ? ಇದಕ್ಕೆ ಉತ್ತರವಾಗಿ ವಾದಿರಾಜೀಯಟಿಪ್ಪಣಿಯಲ್ಲಿ ಈ ಮಾತುಗಳಿವೆ.

''ತಯೋರ್ಮಧ್ಯೇ ಶಿರಸಿ 'ರಾಹುಜ್ಯೇಷ್ಠಂ ಕೇತುಶತಮ್'(ಭಾಗ.6.6.36) ಇತಿ ವಚನಾತ್' ರಾಹೋರಪೀಷತ್ಸನ್ನಿಧಾನಂ ದೇವಾನಾಂ ಶತಸ್ಯ ಚ ಸನ್ನಿಧಾನಮ್ । ತತ್ರಾಪಿ ಶಿರೋಽಭಿಮಾನಿತ್ವಾತ್ ರಾಹೋರಂಶಸ್ಯ ಜ್ಯೇಷ್ಠತಾ ಕೇತೂನಾಂ ಕನಿಷ್ಠತಾ ।''

''ರಾಹುಜ್ಯೇಷ್ಠಂ ಕೇತುಶತಮ್' ಎಂದು ಷಷ್ಠಸ್ಕಂಧದಲ್ಲಿ ಹೇಳುವಂತೆ ಶಿರಸ್ಸಿನಲ್ಲಿ ರಾಹುವಿನ ಅಲ್ಪ ಸನ್ನಿಧಾನವಿದೆ. ಜೊತೆಗೆ ನೂರುದೇವತೆಗಳ ಸನ್ನಿಧಾನವೂ ಇದೆ.'' ಎಂಬ ವಾದಿರಾಜರ ಮಾತಿನಿಂದ ಭಾಗವತದ ವಿಪ್ರಚಿತ್ತಿ ಎಂಬ ದೈತ್ಯನ ಮಕ್ಕಳಾದ 'ಕೇತುಶತಗಳು' ಅಂದರೆ 'ನೂರು ದೇವತೆಗಳು' ಶಿರಸ್ಸಿನಲ್ಲಿ ಪ್ರವಿಷ್ಟರಾದ ದೇವತೆಗಳೆಂದು ತಿಳಿದುಬರುತ್ತದೆ.

ವಂಶೀಧರರು ತಮ್ಮ ಟಿಪ್ಪಣಿಯಲ್ಲಿ ಈ ಶ್ಲೋಕಕ್ಕೆ ವ್ಯಾಖ್ಯಾನಮಾಡುವಾಗ ಜ್ಯೋತಿರ್ನಿಬಂಧದ ವಚನಗಳನ್ನು ಉದಾಹರಿಸಿ ಹೀಗೆ ವ್ಯಾಖ್ಯಾನಿಸುತ್ತಾರೆ-

ವಿಪ್ರಚಿತ್ತಿಃ ಸಿಂಹಾಕಾಯಾಂ ಶತಂ ಚೈಕಮಜೀಜನತ್ ।
ರಾಹುಜ್ಯೇಷ್ಠಂ ಕೇತುಶತಂ ಗ್ರಹತ್ವಂ ಯ ಉಪಾಗತಃ ।। ಭಾಗ. 6.6.37

ಕೇತೂನಾಂ ಶತತ್ವಂ ಜ್ಯೋತಿಶ್ಶಾಸ್ತ್ರೇ ವರ್ಣಿತಮ್-

'ವರುಣಸ್ಯ ದಶ ಸುತಾ ಚತುರ್ವಿಂಶಾ ರವೇಃ ಸುತಾಃ ।
ಅಗ್ನೇಃ ಪುತ್ರಾ ಚತುರ್ವಿಂಶಾ ಯಮಸ್ಯ ನವ ಕೀರ್ತಿತಾಃ ।।

ಅಷ್ಟಾದಶ ಕುಬೇರಸ್ಯ ವಾಯೋರ್ವಿಂಶತಿರೇವ ಚ ।
ಏವಂ ಸಂಖ್ಯಾ ಚ ಕೇತೂನಾಂ ಶತಂ ಪಂಚೋತ್ತರಂ ಭವೇತ್ ।।' ಇತಿ

ಜ್ಯೋತಿರ್ನಿಬಂಧೇ । ಚಕಾರೇಣ ಅನುಕ್ತಾ ಅಪಿ ಪಂಚ ಗ್ರಾಹ್ಯಾಃ ।।

ವರುಣನ ಹತ್ತು ಮಕ್ಕಳು, ಸೂರ್ಯನ ಇಪ್ಪತ್ತುನಾಲ್ಕು ಮಕ್ಕಳು, ಅಗ್ನಿಯ ಇಪ್ಪತ್ತುನಾಲ್ಕು ಮಕ್ಕಳು, ಯಮನ ಒಂಬತ್ತು ಮಕ್ಕಳು, ಕುಬೇರನ ಹದಿನೆಂಟು ಮಕ್ಕಳು, ವಾಯುವಿನ ಇಪ್ಪತ್ತು ಮಕ್ಕಳು. ಹೀಗೆ ನೂರೈದು ಕೇತುಗಳು ಇವೆ. ಭಾಗವತದಲ್ಲಿ ನೂರುಜನ ಕೇತುಗಳು ಎಂದು ಹೇಳಿದ್ದರೂ ಜ್ಯೋತಿರ್ನಿಬಂಧದಲ್ಲಿ ಹೇಳಿದಂತೆ ೧೦೫ ಕೇತುಗಳು ಎಂದು ಹೇಳಬೇಕು.

ವರಾಹಮಿಹಿರನ ಬೃಹತ್ಸಂಹಿತೆಯಲ್ಲಿ ಕೇತುಗಳ ಕುರಿತಾಗಿ ಹೇಳಿರುವ ಮಾತುಗಳನ್ನು ನೋಡೋಣ.

**ಅಥ ಕೇತೂನಾಂ ಮತಾಂತರೇಣ ಸಂಖ್ಯಾಮಾಹ-**

**ಶತಮೇಕಾಧಿಕೇ ಸಹಸ್ರಮಪರೇ ವದಂತಿ ಕೇತೂನಾಮ್ ।**
**ಬಹುರೂಪಮೇಕಮೇವ ಪ್ರಾಹ ಮುನಿರ್ನಾರದಃ ಕೇತುಮ್ ॥ ಕೇತುಚಾರ.11.5.**

**ಏಕೇ ಮುನಯಃ ಪರಾಶರಾದಯಃ ಏಕಾಧಿಕಂ ಶತಂ ಕೇತೂನಾಂ ವದಂತಿ ಕಥಯಂತಿ । ತಥಾ ಚ ಪರಾಶರಃ- ತದ್ಯಥಾ ಶತಮೇಕೋತ್ತರಂ ಕೇತೂನಾಂ ಭವತಿ । ತೇಷಾಂ ಷೋಡಶ ಮೃತ್ಯುನಿಃಶ್ವಾಸಜಾಃ । ದ್ವಾದಶಾದಿತ್ಯಸಂಭವಾಃ । ದಶ ದಕ್ಷಮಖವಿಲಯನೇ ರುದ್ರಕ್ರೋಧಜಾಃ । ಸಪ್ತ ಪೈತಾಮಹಾಃ । ಪಂಚದಶ ಉದ್ದಾಲಕಋಷೇಃ ಪುತ್ರಾಃ । ಸಪ್ತದಶ ಮರೀಚಿಕಶ್ಯಪಲಲಾಟಜಾಃ । ಪಂಚ ಪ್ರಜಾಪತಿಹಾಸ್ಯಜಾಃ । ತ್ರಯೋ ವಿಭಾವಸುಜಾಃ । ಧೂಮೋದ್ಭವಶ್ಚೈಕಃ । ಚತುರ್ದಶ ಮಥ್ಯಮಾನೇ ಅಮೃತೇ ಸೋಮೇನ ಸಹ ಸಂಭೂತಾಃ । ಏಕಸ್ತು ಬ್ರಹ್ಮಕೋಪಜಃ । ಇತಿ**

**ಸಹಸ್ರಮಪರೇ ವದಂತೀತಿ । ಅಪರೇ ಅನ್ಯೇ ಗರ್ಗಾದಯಃ । ಸಹಸ್ರಂ ಕೇತೂನಾಂ ವದಂತಿ । ತಥಾ ಚ ಗರ್ಗಃ-**

**ಅತೀತೋದಯಚಾರಾಣಾಂ ಅಶುಭಾನಾಂ ಚ ದರ್ಶನೇ ।**
**ಆಗಂತೂನಾಂ ಸಹಸ್ರಂ ಸ್ಯಾತ್ ಗ್ರಹಾಣಾಂ ತನ್ನಿಬೋಧ ಮೇ ॥**

**ಬಹುರೂಪಮೇಕಮೇವೇತಿ । ನಾರದಾಖ್ಯೋ ಮುನಿಃ ಏಕಮೇವ ಕೇತುಂ ಪ್ರಾಹೋಕ್ತವಾನ್ । ತನ್ಮತೇ ಏಕ ಏವ ಕೇತುಸ್ತಸ್ಯ ಚ ಬಹೂನಿ ರೂಪಾಣಿ । ಸ ಏವ ದಿವ್ಯಾಂತರಿಕ್ಷಭೌಮ ಇತ್ಯರ್ಥಃ । ತಥಾ ಚ ನಾರದಃ-**

**ದಿವ್ಯಂತರಿಕ್ಷಗೋ ಭೌಮ ಏಕಃ ಕೇತುಃ ಪ್ರಕೀರ್ತಿತಃ ।**
**ಶುಭಾಶುಭಫಲಂ ಲೋಕೇ ದದಾತ್ಯಸ್ತಮಯೋದಯೈಃ ॥ 5 ॥**

ಈ ರೀತಿ ಬೃಹತ್ಸಂಹಿತೆಯಲ್ಲಿ ಕೇತುವಿನ ವಿಷಯದಲ್ಲಿ ವಿವಿಧವಾದ ಅಭಿಪ್ರಾಯಗಳು ಕಂಡುಬರುತ್ತವೆ.

ಈ ರೀತಿ ವ್ಯಾಖ್ಯಾನಕಾರರಲ್ಲಿ, ಬೇರೆ ಬೇರೆ ಆಕರಗ್ರಂಥಗಳಲ್ಲಿ ರಾಹು-ಕೇತುಗಳ ವಿಷಯದಲ್ಲಿ ವಿಭಿನ್ನವಾದ ಅಭಿಪ್ರಾಯಗಳು ಕಂಡುಬರುತ್ತವೆ. ಆದ್ದರಿಂದ ಈ ವಿಷಯದಲ್ಲಿ ಇನ್ನೂ ಸಾಕಷ್ಟು ಸಂಶೋಧನೆ ನಡೆಯಬೇಕು. ನಿರವಕಾಶಪ್ರಮಾಣಗಳಿಗೆ ಅನುಗುಣವಾಗಿ ತತ್ವನಿರ್ಣಯ ಆಗಬೇಕು.

### ಅತ್ಯಕ್ತದೇಹಂ ನೃಪತಿಂ ಚಕಾರ

ಶ್ರೀವೇದವ್ಯಾಸದೇವರು ಗ್ರಂಥನಿರ್ಮಾಣದ ಕಾರ್ಯ ಮುಗಿಸಿದ ಮೇಲೆ ಸಂಚಾರಕ್ಕೆ ಹೊರಟರು. ಸಂಚರಿಸುವಾಗ ಬಂಡಿಗಳ ಶಬ್ದದಿಂದ ಭಯಗೊಂಡಿರುವ ಒಂದು ಕೀಟವನ್ನು ವೇದವ್ಯಾಸದೇವರು ಮಾತನಾಡಿಸುತ್ತಾರೆ. ಎಲ್ಲ ಪ್ರಾಣಿಗಳ ಮನಸ್ಸಿನಲ್ಲಡಗಿದ ವಿಚಾರ, ಆಡುವ ಭಾಷೆ, ತಿನ್ನುವ ಆಹಾರ

ಇವೆಲ್ಲವನ್ನೂ ತಿಳಿದ ಸರ್ವಜ್ಞರು ವ್ಯಾಸರು. ಆದರೂ ಕೀಟದಿಂದಲೇ ಅದರ ಪೂರ್ವಜನ್ಮದ ವೃತ್ತಾಂತವನ್ನು ಕೇಳುತ್ತಾರೆ. 'ನಿನಗೆ ರಾಜ್ಯವನ್ನು ನೀಡುತ್ತೇನೆ. ಈ ಕೆಟ್ಟದೇಹವನ್ನು ಬಿಡು' ಎಂದು ಹೇಳುತ್ತಾರೆ. ಕೀಟವು ದೇಹ ಬಿಡುವುದಕ್ಕೆ ಒಪ್ಪುವುದಿಲ್ಲ. ಆಗ ತನ್ನ ಭಕ್ತನಾದ ಕೀಟವನ್ನು ಹಾಗೆಯೆ ರಾಜನನ್ನಾಗಿ ಮಾಡುತ್ತಾರೆ. ಆಚಾರ್ಯರು, ಈ ವಿಷಯವನ್ನು 'ಅತ್ಯಕ್ತದೇಹಂ ನೃಪತಿಂ ಚಕಾರ ಪುರಾ ಸ್ವಭಕ್ತಂ ವೃಷಲಂ ಸುಲುಬ್ಧಮ್' ಎಂಬ ಮಾತಿನಿಂದ ಹೇಳುತ್ತಾರೆ.

ಇಲ್ಲಿ 'ಅತ್ಯಕ್ತದೇಹಂ' ಎಂಬ ಪದಕ್ಕೆ ಟಿಪ್ಪಣೀಕಾರರು ವಿಭಿನ್ನವಾದ ಅರ್ಥಗಳನ್ನು ಹೇಳುತ್ತಾರೆ. 'ಅತ್ಯಕ್ತದೇಹಂ' ಎಂದರೆ 'ಕೀಟದೇಹದಿಂದಲೇ ಅವನನ್ನು ರಾಜನನ್ನಾಗಿ ಮಾಡಿದರು' ಇದು ಕೆಲವು ವ್ಯಾಖ್ಯಾನಕಾರರು ಮಾಡುವ ಅರ್ಥ. ಈ ಅರ್ಥ ಸ್ವಾರಸಿಕವಾಗಿ ತೋರುವಂತಹುದು.

ಅನಂತಭಟ್ಟೀಟಿಪ್ಪಣಿಯಲ್ಲಿ ವಿಶಿಷ್ಟವಾದ ಅರ್ಥವನ್ನು ಹೇಳುತ್ತಾರೆ. ''ಅತ್ಯಕ್ತದೇಹಂ ಕೀಟದೇಹಮೇವ ಮನುಷ್ಯದೇಹಂ ಕೃತ್ವಾ ರಾಜಾನಂ ಚಕಾರೇತ್ಯರ್ಥಃ । ನ ಚೈವಂ ಇಚ್ಛಾನನುಸಾರಿತ್ವಂ ಸ್ಯಾದಿತಿ ವಾಚ್ಯಮ್ । ತದ್ದೇಹಂ ತ್ಯಕ್ತ್ವಾ ದೇಹಾಂತರಪ್ರಾಪ್ತೇರನಿಚ್ಛಿತತ್ವಾತ್ ।'

'ಅತ್ಯಕ್ತದೇಹಂ ನೃಪತಿಂ ಚಕಾರ' ಎಂದರೆ 'ಕೀಟದೇಹವನ್ನೇ ರಾಜಕುಮಾರನ ದೇಹವನ್ನಾಗಿ' ಮಾಡಿದರು ಎಂದು ಅವರು ಹೇಳುವ ಅರ್ಥ. ತಾಮ್ರಪರ್ಣೀಟಿಪ್ಪಣಿಯ ಅಭಿಪ್ರಾಯವೂ ಇದೇ ರೀತಿಯಾಗಿದೆ. ಇಲ್ಲಿ ಶ್ರೀಮದಾಚಾರ್ಯರು 'ಕೀಟದೇಹಂ ನೃಪತಿದೇಹಂ ಚಕಾರ' ಎಂದು ಹೇಳಬಹುದಾಗಿತ್ತು. ಅಥವಾ 'ಅತ್ಯಕ್ತದೇಹಂ ನೃಪತಿಂ ಚಕಾರ' ಎನ್ನುವುದಕ್ಕೆ ಹಾಗೆ ಅರ್ಥೈಸುವುದಕ್ಕೆ ವಿಶೇಷಪ್ರಮಾಣವನ್ನು ಟಿಪ್ಪಣಿಕಾರರು ಉದಾಹರಿಸಬೇಕಿತ್ತು. ಆದರೆ ಟಿಪ್ಪಣಿಕಾರರು ಹೇಳುವ ಅರ್ಥಕ್ಕೆ ಆಚಾರ್ಯರ ವಚನ ನಿರವಕಾಶ ಪ್ರಮಾಣವಾಗುವದಿಲ್ಲ. ವಿಶೇಷಪ್ರಮಾಣವನ್ನು ಟಿಪ್ಪಣಿಯಲ್ಲಿ ಉದಾಹರಿಸಿಲ್ಲ. ಆದ್ದರಿಂದ ಈ ರೀತಿ ಅರ್ಥೈಸುವುದು ವಿಚಾರಣೀಯವಾಗಿದೆ.

**ಆಚಾರ್ಯರು ಹೇಳುವ ದೇವಾಸುರರ ಲಕ್ಷಣಗಳಿಗೆ ಪದ್ಮಪುರಾಣದ ಆಧಾರ.**

ಹನ್ನೊಂದನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ದೇವತೆಗಳು ಅಸುರರು ಭೂಮಿಯಲ್ಲಿ ಕ್ಷತ್ರಿಯರಾಗಿ ಅವತಾರ ಮಾಡಿದ್ದನ್ನು ಹೇಳಿದ್ದಾರೆ. ಅಸುರರು ತಮ್ಮ ನಿಜವಾದ ರೂಪದಿಂದ, ಬಲದಿಂದ ಧರ್ಮದ ಶಕ್ತಿಯನ್ನು ದೇವತೆಗಳ ಪಕ್ಷವನ್ನು ಕುಂದಿಸಲು ಸಾಧ್ಯವಾಗಲಿಲ್ಲ. ಅದಕ್ಕಾಗಿ ತಂತ್ರದಿಂದ ಧರ್ಮದ ಶಕ್ತಿಯನ್ನು ಸದೆಬಡಿಯಲು ಉತ್ತಮವಾದ ಕ್ಷತ್ರಿಯಕುಲದಲ್ಲಿ ಹುಟ್ಟಿದರು. ಸತ್ಕುಲದಲ್ಲಿ ಜನಿಸಿದ ಇವರಿಗೆ ಹರಿಭಕ್ತಿ, ಧರ್ಮನಿಷ್ಠೆ, ಔದಾರ್ಯ, ಭೂತದಯೆ ಮೊದಲಾದ ಯಾವು ಗುಣಗಳೂ ಸ್ವಾಭಾವಿಕವಾಗಿ ಇಲ್ಲ. ಆದರೂ ಸಜ್ಜನರ ವಿನಾಶಕ್ಕಾಗಿ, ದೇವತೆಗಳ, ಧರ್ಮದಲ್ಲಿಯ ಶ್ರದ್ಧೆಯನ್ನು ಧ್ವಂಸ ಮಾಡುವದಕ್ಕಾಗಿ ಧರ್ಮದ ಮುಖವಾಡದಲ್ಲಿ, ಸಾತ್ವಿಕರ ಸೋಗಿನಲ್ಲಿ ಭೂಮಿಯ ಮೇಲೆ ಅವತರಿಸಿದರು.

ಹೀಗೆ ಸುಸ್ವಭಾವದ ದೇವತೆಗಳು ದುಃಸ್ವಭಾವದ ದೈತ್ಯರು ಕ್ಷತ್ರಿಯರಾಗಿ ಹುಟ್ಟಿರುವುದರಿಂದ ಅವರ ನಿಜವಾದ ಸ್ವರೂಪ ತಿಳಿಯುವುದು ತುಂಬ ಕಷ್ಟವಾಯಿತು. ವ್ಯಾಸರೂ ತಮ್ಮ ಗ್ರಂಥಗಳಲ್ಲಿ ಅಸುರರ ಆಕಸ್ಮಿಕವಾದ ಗುಣಗಳನ್ನು ಪ್ರಾಸಂಗಿಕವಾಗಿ ಅಲ್ಲಲ್ಲಿ ಹೇಳಿದರು. ವ್ಯಾಸರ ಇಂತಹ ಮಾತುಗಳನ್ನು ನೋಡಿಯೇ ಪ್ರಾಚೀನ ವ್ಯಾಖ್ಯಾನಕಾರರು ಅರ್ವಾಚೀನ ವಿಮರ್ಶಕರು ನಿಜವಾದ ಸ್ವರೂಪವನ್ನು

ನಿರ್ಣಯಿಸದೆ ತಡವರಿಬಿಟ್ಟರು. ವೇದವ್ಯಾಸರ ಆ ಮಾತುಗಳನ್ನು ಪೂರ್ವಾಪರಸಂದರ್ಭಗಳಿಗೆ ಅನುಗುಣವಾಗಿ ವಿಮರ್ಶಿಸದೆ, ಅವರ ಇನ್ನುಳಿದ ವಾಙ್ಮಯಗಳನ್ನು ಪರಿಶೀಲಿಸದೆ ಸ್ವಚ್ಛಂದವಾದ ಅಭಿಪ್ರಾಯವನ್ನು ರೂಪಿಸಿಕೊಂಡರು. ಇಂಥವರ ಕೈವಾಡದಿಂದ ಮೂಲತಃ ದುಷ್ಟಪಾತ್ರಗಳಾಗಿದ್ದವರೂ ಮುಂದೆ ಧೀರೋದಾತ್ತಪಾತ್ರವಾಗಿ ಪರಿಣಮಿಸಿಬಿಟ್ಟರು.

ಮಧ್ವಾಚಾರ್ಯರು ಮಾತ್ರ ಇತಿಹಾಸ ಪುರಾಣಗಳನ್ನೋದುವ ಕ್ರಮ, ಅರ್ಥೈಸುವ ರೀತಿ, ಅಲ್ಲಲ್ಲಿ ತೋರಬಹುದಾದ ಸಿದ್ಧಾಂತವಿರೋಧಿ ಮಾತುಗಳ ಸಮನ್ವಯ ಪ್ರಕಾರವನ್ನು ತಿಳಿಸುತ್ತಾ ತಪ್ಪುದಾರಿಗೆ ಹೋಗದಂತೆ ನಮ್ಮನ್ನು ರಕ್ಷಿಸುತ್ತಾರೆ. ಆಯಾ ಪಾತ್ರಗಳ ಸ್ವರೂಪವನ್ನು ವ್ಯಾಸರ ನಿಜವಾದ ಅಭಿಪ್ರಾಯಕ್ಕನುಗುಣವಾಗಿ ತಿಳಿಸುತ್ತಾರೆ. ಅವುಗಳಲ್ಲಿ ಯಾರು ಸ್ವಾಭಾವಿಕವಾಗಿ ದೇವತೆಗಳು ಸ್ವಾಭಾವಿಕವಾಗಿ ದೈತ್ಯರು ಎನ್ನುವದನ್ನು ನಿರ್ಣಯಿಸುವದಕ್ಕೆ ನಮಗೆ ಮಾನದಂಡಗಳನ್ನು ಕೊಡುತ್ತಾರೆ. ಈ ಮಾನದಂಡಗಳು ಮಧ್ವಾಚಾರ್ಯರು ತಾವು ಕಲ್ಪಿಸಿ ಹೇಳಿದ್ದಲ್ಲ. ನಾವು ಪುರಾಣ, ಇತಿಹಾಸ ಮುಂತಾದ ಆಕರಗ್ರಂಥಗಳನ್ನುಆದಿಯಿಂದ ಅಂತ್ಯದವರೆಗೆ ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಿದಾಗ ಅಲ್ಲಲ್ಲಿ ನಮಗೆ ಸ್ಪಷ್ಟವಾಗಿ ಕಂಡುಬರುತ್ತವೆ.

ಯೇ ಪಾಂಡವಾನಾಂ ಅಭವನ್ ಸಹಾಯಾ ದೇವಾಶ್ಚ ದೇವಾನುಚರಾಃ ಸಮಸ್ತಾಃ ।
ಅನ್ಯೇ ತು ಸರ್ವೇಽಪ್ಯಸುರಾ ಹಿ ಮಧ್ಯಮಾ ಯೇ ಮಾನುಷಾಸ್ತೇ ಚಲಬುದ್ಧಿವೃತ್ತಯಃ ॥

ಲಿಂಗಂ ಸುರಾಣಾಂ ಹಿ ಪರೈವ ಭಕ್ತಿಃ ವಿಷ್ಣೌ ತದನ್ಯೇಷು ಚ ತತ್ಪ್ರತೀಪತಾ ।
ಅತೋಽತ್ರ ಯೇ ಯೇ ಹರಿಭಕ್ತಿತತ್ಪರಾಸ್ತೇ ತೇ ಸುರಾಸ್ತದ್ಭರಿತಾ ವಿಶೇಷತಃ ॥

ಈ ವಿಷಯ ಹನ್ನೊಂದನೇ ಅಧ್ಯಾಯದ ಕೊನೆಯಲ್ಲಿ ಬರುತ್ತದೆ. ಇಲ್ಲಿ ಭೂಮಿಯಲ್ಲಿ ಅವತರಿಸಿದ ದೇವತೆಗಳ ಹಾಗು ಅಸುರರ ಲಕ್ಷಣಗಳನ್ನು ತುಂಬ ಸುಂದರವಾಗಿ ವಿವರಿಸಿದ್ದಾರೆ. ಈ ಅಧ್ಯಾಯದಲ್ಲಿ ಮಾತ್ರವಲ್ಲದೆ ಪುರಾಣಪ್ರಸ್ತಾಕ್ಕೆ ಸಂಬಂಧಿಸಿದ ಭಾಗವತತಾತ್ಪರ್ಯನಿರ್ಣಯ ಹಾಗು ಮಹಾಭಾರತ-ತಾತ್ಪರ್ಯ ನಿರ್ಣಯಗಳಲ್ಲಿ ಪ್ರಸಂಗ ಬಂದಾಗ ದೇವತೆಗಳಿಗೆ ಹಾಗು ಅಸುರರಿಗೆ ಸಂಬಂಧಿಸಿದ ಅನೇಕ ಮಾತುಗಳನ್ನು ಹೇಳುತ್ತಾರೆ. ವಿಭಿನ್ನಪ್ರಸಂಗಗಳಲ್ಲಿ ಹೇಳಿದ ಆ ಎಲ್ಲ ಮಾತುಗಳು ಪದ್ಮಪುರಾಣದ ಈ ಶ್ಲೋಕಗಳಲ್ಲಿ ಏಕತ್ರ ಬಂದಿದ್ದನ್ನು ನಾವು ಕಾಣಬಹುದು. ಪದ್ಮಪುರಾಣದ ಈ ವಚನಗಳನ್ನು ನೋಡಿದಾಗ ಆಚಾರ್ಯರು ಬರೆದಭಾರತದ ವ್ಯಾಖ್ಯಾನ ಎಷ್ಟು ಪ್ರಮಾಣಪ್ರಮಿತವಾಗಿದೆ ಎಂದು ತಿಳಿಯಬಹುದು.

ಸುರಾಣಾಂ ಲಕ್ಷಣಂ ಬ್ರೂಮೋ ನರರೂಪಂ ವ್ಯವಸ್ಥಿತಮ್ ।
ದ್ವಿಜದೇವಾತಿಥೀನಾಂ ಚ ಗುರುಸಾಧುತಪಸ್ವಿನಾಮ್ ॥

ಪೂಜಾ ತಪೋ ರತೋ ನಿತ್ಯಂ ಧರ್ಮಶಾಸ್ತ್ರೇಷು ನೀತಿಷು ।
ಕ್ಷಮಾಶೀಲೋ ಜಿತಕ್ರೋಧಃ ಸತ್ಯವಾದೀ ಜಿತೇಂದ್ರಿಯಃ ॥

ಅಲುಬ್ಧಃ ಪ್ರಿಯವಾಕ್ ಶಾಂತೋ ಧರ್ಮಶಾಸ್ತ್ರಾರ್ಥಸಂಪ್ರಿಯಃ ।
ದಯಾಲುರ್ದಯಿತೋ ಲೋಕೇ ರೂಪವಾನ್ ಮಧುರಸ್ವರಃ ॥

ವಾಗೀಶಃ ಸರ್ವಕಾರ್ಯೇಷು ಗುಣೇ ದಕ್ಷೋ ಮಹಾಬಲಃ ।
ಸಾಕ್ಷರಶ್ಚಾಪಿ ವಿದ್ವಾಂಶ್ಚ ಗೀತನೃತ್ಯಾರ್ಥತತ್ತ್ವವಿತ್ ॥

ಆತ್ಮವಿದ್ಯಾದಿಕಾರ್ಯೇಷು ಸರ್ವತಂತ್ರೀಸ್ವರೇಷು ಚ ।
ಹವಿಷ್ಯೇಷು ಚ ಸರ್ವೇಷು ಗವ್ಯೇಷು ಚ ನಿರಾಮಿಷೇ ॥

ಸದ್ಯೋಗಾಸ್ವಾದದ್ರವ್ಯೇ ಚ ಪ್ರತ್ಯಗ್ರೇ ಚಾತಿಶೋಭನೇ ।
ಗಂಧಮಾಲ್ಯೇಷು ವಸ್ತ್ರೇಷು ಶಾಸ್ತ್ರೇಷ್ವಾಭರಣೇಷು ಚ ॥

ಸಂಪ್ರೀತಶ್ಚಾತಿಥೌ ದಾನೇ ಪಾರ್ವಣಾದಿಷು ಕರ್ಮಸು ।
ಸ್ನಾನದಾನಾದಿಭಿಃ ಕಾರ್ಯೇ ವ್ರತೈರ್ಯಜ್ಞೈಃ ಸುರಾರ್ಚನೈಃ ॥

ಕಾಲೋ ಗಚ್ಛತಿ ಪಾರ್ಶ್ವೈಶ್ಚ ನ ಕ್ಲೀಬಂ ವಾಸರಂ ಭವೇತ್ ।
ಅಯಮೇವ ಮನುಷ್ಯಾಣಾಂ ಸದಾಚಾರೋ ನಿರಂತರಮ್ ॥
ದೇವವನ್ಮಾನವಾಚಾರೋ ಗೀಯತೇ ಮುನಿಸತ್ತಮೈಃ ।

'ಮೇಲಿನ ಶ್ಲೋಕಗಳಲ್ಲಿ ಭೂಮಿಯಲ್ಲಿ ಅವತರಿಸಿದ ದೇವತೆಗಳ ಹಾಗು ದೇವತೆಗಳ ವಿಶೇಷ ಸನ್ನಿಧಾನದಿಂದ ಕೂಡಿದಸಾತ್ತ್ವಿಕಮನುಷ್ಯರ ಆಚರಣೆಯನ್ನು ಹೇಳಿದ್ದಾರೆ. ಅವರ ಆಚರಣೆಗಳನ್ನು ನೋಡಿ ಅವರ ಸ್ವರೂಪವನ್ನು ಊಹಿಸಬಹುದು. ದೇವದ್ವಿಜರ ಆರಾಧನೆ,ಅತಿಥಿಸೇವೆ,ಗುರು,ಸಾಧು ತಪಸ್ವಿಗಳಲ್ಲಿ ಗೌರವ ಭಾವನೆ, ಪೂಜೆಯಲ್ಲಿ ಆಸಕ್ತಿ , ತಪಸ್ಸಿನಲ್ಲಿ ನಿಷ್ಠೆ, ಧರ್ಮಕಾರ್ಯಗಳಲ್ಲಿಶ್ರದ್ಧೇ , ಕ್ರೋಧಸಂಯಮ, ಇಂದ್ರಿಯಜಯ, ಮಧುರ ಮಾತು, ಪ್ರಾಣಿದಯೆ, ವೇದಾಂತವಿಜ್ಞಾನ, ವೀಣೆ ಮುಂತಾದವುಗಳಲ್ಲಿ ಆಸಕ್ತಿ, ಪುಣ್ಯಕಾರ್ಯದಲ್ಲಿಪ್ರವೃತ್ತಿ, ಹಸುವಿನ ಹಾಲು ತುಪ್ಪಗಳಲ್ಲಿ ಪ್ರೀತಿ, ಮದ್ಯಮಾಂಸಾದಿಗಳಲ್ಲಿ ಜಿಗುಪ್ಸೆ, ಸಜ್ಜನರ ಸಹವಾಸದಲ್ಲಿ ತತ್ಪರತೆ, ಪಾಠಪ್ರವಚನನಿಷ್ಠೆ, ಕೃಚ್ಛ್ರವ್ರತೋಪವಾಸಗಳ ಆಚರಣೆ ಮೊದಲಾದವುಗಳು ದೇವತೆಗಳು, ದೇವತಾಸನ್ನಿಧಾನೋಪೇತರಾದವರ ಲಕ್ಷಣಗಳು.'

**ಯೇ ಪಾಂಡವಾನಾಮಭವನ್ ಸಹಾಯಾ...**

ಭಗವದ್ಭಕ್ತಿ,ಧರ್ಮಪಕ್ಷಪಾತ, ಪರಾಕ್ರಮ, ಸೌಜನ್ಯ , ದಾಕ್ಷ್ಯ , ವಿನಯ, ಆಶ್ರಿತವಾತ್ಸಲ್ಯ, ಶಾಂತಿಪ್ರಿಯತೆ, ಸರ್ವಭೂತಹಿತ ಮುಂತಾದ ಗುಣಗಳಿಂದ ಸಂಪನ್ನರಾಗಿದ್ದಾರೆ ಪಾಂಡವರು. ಗುಣಗಳಿಂದ ಇಷ್ಟು ಎತ್ತರದ ಮಟ್ಟದಲ್ಲಿ ಇರುವವರು ದೇವತೆಗಳೇ ಸರಿ. ಇಂತಹ ಪಾಂಡವರಿಗೆ ಯಾರು ಸಹಾಯಕರಾಗಿದ್ದಾರೋ ಅವರೆಲ್ಲರೂ ದೇವತೆಗಳು. ಯಾರು ವಿರೋಧಿಗಳಾಗಿದ್ದಾರೋ ಅವರೆಲ್ಲರೂ ಅಸುರರು.ಈ ವಿಷಯವನ್ನು ಹೇಳುವ ಪದ್ಮಪುರಾಣದ ವಚನಗಳನ್ನು ನೋಡೋಣ.

ದ್ವಯೋಸ್ತುಲ್ಯಾ ಚ ಸಂಪ್ರೀತಿಃ ನ ದೈತ್ಯಾದೌ ಭವೇತ್ಕಿಲ ॥

ಪ್ರೀತಿಭಾವಂ ಪರಂ ಸೌಖ್ಯಂ ಸೌಹೃದಂ ಸುಕೃತಂ ಶುಭಮ್ ।
ದೈವಮಾನುಷಯೋರೇವ ದೈತ್ಯರಾಕ್ಷಸಯೋಸ್ತಥಾ ॥

ಪ್ರೇತಾದೀನಾಂ ಚ ಪ್ರೇತೇಷು ಪಶೌ ಪ್ರೀತಿಃ ಪಶೋರಪಿ ।
ಕಾಕಾದಯಃ ಸ್ವಜಾತೌ ಚ ತಥಾನ್ಯೇ ಚ ಸ್ವಜಾತಿಷು ॥

ಪ್ರೀತಾ ಭವಂತಿ ಚಾಪ್ರೀತಾ ವಿದ್ಯಾ ತೇಷಾಂ ಚ ಲಕ್ಷಣಮ್ ।
ಏವಂ ಪುಣ್ಯವಿಶೇಷೇಣ ಸವಿಶೇಷಾಸು ಜಾತಿಷು ॥

ಪ್ರಿಯಾಪ್ರಿಯಂ ವಿಜಾನೀಯಾತ್ ಪುಣ್ಯಾಪುಣ್ಯಂ ಗುಣಾಗುಣಮ್ ।
ದಂಪತ್ಯೋರ್ನ ಸುಖಂ ಕಿಂಚಿತ್ ಜಾತಿಭೇದಾನ್ನೃಣಾಂ ಭುವಿ ॥

ಸ್ವಜಾತಿಷು ಭವೇತ್ಪ್ರೀತಿಃ ಮುಕ್ತೌ ವಾ ನಿರಯೇಽಪಿ ವಾ ।
ಅತಿಪುಣ್ಯಾಲ್ಲಭೇದಾಯುಃ ಶೋಭನಾಃ ಪುಣ್ಯಕಾರಿಣಃ ॥
ಪಾಪಾತ್ಮಾನೋ ಲಭಂತೇಽಂತಂ ಯೇ ಚ ದೈತ್ಯಾದಯೋ ನರಾಃ ।

ಈ ಶ್ಲೋಕಗಳ ಅಭಿಪ್ರಾಯ- *'ಶುಭಗುಣಳಿರುವವರು ತಮ್ಮಂತಹ ದೈವೀಗುಣಗಳಿರುವ ಸಾಧು ಸಜ್ಜನರ ಸ್ನೇಹವನ್ನೇ ಬೆಳೆಸುತ್ತಾರೆ. ಇದರಂತೆ ಅಶುಭಗುಣವಿರುವ ದುಷ್ಟಸ್ವಭಾವದ ದುರ್ಜನರು ತಮ್ಮಂತಹ ದುರಾಚಾರಿಗಳದೇ ಸ್ನೇಹ ಮಾಡುತ್ತಾರೆ. ಕಾಗೆಗಳು ತಮ್ಮ ಜಾತಿಯದೇ ಆದ ಇತರ ಕಾಗೆಗಳ ಮೇಲೆಯೇ ಪ್ರೀತಿ, ವಿಶ್ವಾಸ ಮಾಡುವಂತೆ ಇವರೆಲ್ಲರೂ ತಮ್ಮ ತಮ್ಮ ಜಾತಿಬಾಂಧವರೊಂದಿಗೆ ಬೇಗ ಹೊಂದಿಕೊಳ್ಳುತ್ತಾರೆ. ಇಂತಹ ರಾಕ್ಷಸರು,ದೈತ್ಯರು,ದೇವತೆಗಳು ಎಲ್ಲ ಯುಗಗಳಲ್ಲೂ ಇರುತ್ತಾರೆ.'*

ಕೃತೇ ಜಾತಾಃ ಸುರಾ ಭೂಮೌ ನ ದೈತ್ಯಾಶ್ಚಾನ್ಯಜಾತಯಃ ॥

ತ್ರೇತಾಯಾಮೇಕಪಾದಂ ಚ ದ್ವಿಪಾದಂ ದ್ವಾಪರೇ ಯುಗೇ ।
ಸಂಧ್ಯಾಯಾಂ ಚ ಕಲೇರೇವ ಸರ್ವಪಾದಂ ಚ ಸಂಕುಲಮ್ ॥

ದೇವಾದೀನಾಂ ಭವೇಜ್ಜಾತಂ ಭಾರತಂ ಯತ್ಪ್ರವರ್ತಿತಮ್ ।
ಯೇ ತೇ ದುರ್ಯೋಧನಸ್ಯೈವ ಯೋಧಾಃ ಸೈನ್ಯಾದಯಸ್ತಥಾ ॥

ತೇ ಚ ದೈತ್ಯಾದಯಃ ಸರ್ವೇ ಯೇ ಚ ಕರ್ಣಾದಯೋ ಭುವಿ ।
ಗಾಂಗೇಯೋ ವಸುಮುಖ್ಯಶ್ಚ ದ್ರೋಣೋ ದೇವಮುನಿಃ ಪ್ರಭುಃ ॥

ಅಶ್ವತ್ಥಾಮಾ ಹರಃ ಸಾಕ್ಷಾತ್ ಹರಿರ್ನಂದಕುಲೋದ್ಭವಃ ।
ಪಂಚೇಂದ್ರಾಃ ಪಾಂಡವಾ ಜಾತಾ ವಿದುರೋ ಧರ್ಮ ಏವ ಚ ॥

ಗಾಂಧಾರೀ ದ್ರೌಪದೀ ಕುಂತೀ ಚೈತಾ ದೇವ್ಯೋ ಧರಾತಲೇ ।
ದೇವದೈತ್ಯಾಃ ಕಲೇರ್ಮಧ್ಯೇ ದೈತ್ಯಾಶ್ಶೇಷೇ ಚ ಮಾನವಾಃ ॥

ಉತ್ಪತ್ಸ್ಯಂತೇ ಸದಾ ಪ್ರೇತಾಃ ಕ್ರವ್ಯಾದಾಃ ಪಶುಪಕ್ಷಿಣಃ ।
ತೇಷಾಂ ಚ ಕುಲಟಾ ದಾಸೀ ನಿತ್ಯಕಷ್ಟಾಯವೀಯಸೀ ॥

ನಿತ್ಯಂ ದ್ವಂದ್ವೇಷು ಸಂಪ್ರೀತ್ಯಾ ತೇಷಾಮಾಚಾರಭಾಷಿಣೇ ।
ಕಿಲ್ಬಿಷೇಷು ಚ ಸರ್ವೇಷು ಕಲಹೇಽನ್ಯಾಯಕರ್ಮಣಿ ॥
ರತಾ ದೈತ್ಯಾದಯೋ ಯೇ ತೇ ಸರ್ವೇ ನಿರಯಗಾಮಿನಃ ।

'ಮಹಾಭಾರತ ಯುದ್ಧವು ಕೌರವ-ಪಾಂಡವರಲ್ಲಿ ನಡೆದದ್ದೇನೋ ನಿಜ. ಆದರೆ ಅದೂ ಕೂಡ ಒಂದು ರೀತಿಯಲ್ಲಿ ದೇವ-ದಾನವರ ಯುದ್ಧವೇ ಸರಿ. ಕೌರವ-ಪಾಂಡವರೂ ಅವರವರ ಪಕ್ಷದವರೂ ನರರೂಪದಿಂದ ಜನಿಸಿ ಬಂದ ಸುರಾಸುರರೇ. ದ್ರೋಣ-ದೇವಮುನಿ, ಅಶ್ವತ್ಥಾಮ-ಮಹಾದೇವ, ಕೃಷ್ಣ-ಸಾಕ್ಷಾತ್ ಶ್ರೀಹರಿ, ದುರ್ಯೋಧನ-ಕಲಿ,ಧರ್ಮರಾಜ-ಯಮಧರ್ಮ,ವಿದುರನೂ ಅವನೇ. ಭೀಮ-ವಾಯು,ಅರ್ಜುನ-ಇಂದ್ರ ,ಇದರಂತೆ ಗಾಂಧಾರೀ,ದ್ರೌಪದೀ,ಕುಂತಿಯರು ದೇವತಾಸ್ತ್ರೀಯರು. ದ್ವಾಪರಯುಗದಂತೆ ಕಲಿಯುಗದಲ್ಲಿ ದೈತ್ಯದಾನವರು ಮನುಜರೂಪದಿಂದ ಹುಟ್ಟಿಬರುತ್ತಾರೆ.

ದೈತ್ಯರು ಮಾನವರಾಗಿ ಹುಟ್ಟಿದಾಗ ಧರ್ಮದ್ರೋಹ, ಹರಿದ್ವೇಷ, ಸಜ್ಜನರ ಹಿಂಸೆ, ಪಾಪಾಚಾರ ಹಾಗೂ ಹಿಂಸಾಚಾರ ಮೊದಲಾದ ದುರ್ವ್ಯಾಪಾರದಿಂದ ನರಕಕ್ಕೆ ಹೋಗುತ್ತಾರೆ. ದೈವೀಪುರುಷರು ವ್ರತ, ಉಪವಾಸ, ಯಜ್ಞ, ದೇವತಾರ್ಚನೆ, ಸಜ್ಜನಪ್ರೀತಿ, ಇಂದ್ರಿಯನಿಗ್ರಹ, ಮೋಕ್ಷಮಾರ್ಗಸಾಧನೆ,ನೀತಿನಿಷ್ಠೆ, ಯಮ, ನಿಯಮ, ಸದಾಚರಣೆ, ಜಪತಪಗಳಿಂದ ಭಗವಂತನ ಪ್ರೀತಿಯನ್ನು ಸಂಪಾದಿಸಿ, ಮೋಕ್ಷಮಾರ್ಗವನ್ನು ಹಿಡಿಯುತ್ತಾರೆ.'

**ಆಚಾರ್ಯರು ಹೇಳುವ ಅಸುರರ ಸ್ವಭಾವ**

'ಅಸುರಾಣಾಂ ಸುಖಾದ್ಯಾಶ್ಚ ದೇವಾವೇಶಾದುದೀರಿತಾಃ ।
ಸ್ವತಸ್ತು ನಿರ್ಗುಣಾಃ ಸರ್ವೇ ಸರ್ವದೋಷಾತ್ಮಕಾ ಮತಾಃ ॥' ಭಾಗ.ತಾ.11.2.49.

'ಅನಾದಿದ್ವೇಷಿಣೋ ದೈತ್ಯಾ ವಿಷ್ಣೌ ದ್ವೇಷೋ ವಿವರ್ಧಿತಃ ।
ತಮಸ್ಯಂಧೇ ಪಾತಯತಿ ದೈತ್ಯಾನಂತೇ ವಿನಿಶ್ಚಯಾತ್ ॥' ತಾ.ನಿ.1.108'

'ಆಸುರೀಣಾಂ ವರಾದೇಸ್ತು ವಪುರ್ಮಾತ್ರಂ ಭವಿಷ್ಯತಿ ।
ನ ಲಕ್ಷಣಾನ್ಯತಸ್ತಾಸಾಂ ನೈವ ಭಕ್ತಿಃ ಕಥಂಚನ ॥' ತಾ.ನಿ. 2.39,

'ಏವಂ ಸುರಾಣಾಂ ಚ ನಿಸರ್ಗಜಂ ಬಲಂ
ತಥಾಽಸುರಾಣಾಂ ವರದಾನಸಂಭವಮ್ ॥ ತಾ.ನಿ. 3.॥'

ಮೇಲೆ ಉದಾಹರಿಸಿದ ವಚನಗಳಲ್ಲಿ ಅಸುರರಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಶ್ರೀಮದಾಚಾರ್ಯರು ಹೇಳುತ್ತಾರೆ. 'ಅಸುರರಲ್ಲಿ ಸ್ವಾಭಾವಿಕವಾಗಿ ಜ್ಞಾನ, ಸುಖ, ಬಲ, ಪ್ರೀತಿ, ದಯಾ, ಸುರೂಪ, ಕಾಂತಿ ಮುಂತಾದ ಯಾವ ಸದ್ಗುಣಗಳೂ ಇಲ್ಲ. ತಾತ್ಕಾಲಿಕವಾಗಿ ಅವರಲ್ಲಿ ಕಂಡುಬರುವ ವಿಷ್ಣುಭಕ್ತಿ , ಧರ್ಮಶ್ರದ್ಧೆ, ಬಲ, ಒಳ್ಳೆಯ ರೂಪ ಮುಂತಾದ ಗುಣಗಳು ವರದಿಂದಲೋ, ಮತ್ತೊಬ್ಬರ ಆವೇಶದಿಂದಲೋ, ಪರಿಸರದಿಂದಲೋ ಎಂದು ತಿಳಿಯಬೇಕು. ಈ ಎಲ್ಲ ವಿಷಯಗಳನ್ನು ಪದ್ಮಪುರಾಣದ ವಚನಗಳಲ್ಲಿ ನೋಡೋಣ.

**ವೈಶಂಪಾಯನ ಉವಾಚ-**

ದೈತ್ಯಾದೀನಾಂ ಮೃಷಾಭಾವಾತ್ ಸುರತ್ವಂ ನ ಸುರಾಲಯಮ್ ।
ಕಥಂ ಭೋಗ್ಯಂ ಕಥಂ ಸೌಖ್ಯಂ ಆರೋಗ್ಯಂ ಬಲಸಂಚಯಮ್ ॥

ರಾಜ್ಯಮಾಯುಸ್ತಥಾ ಕೀರ್ತಿಃ ಅಭೀಷ್ಟಂ ದಯಿತಂ ಬಲಮ್ ।
ನೀತಿವಿದ್ಯಾದಿಕಂ ಭಾವ್ಯಂ ಜನ್ಮವೃದ್ಧಂ ಸದಾತನಮ್ ॥

ದಾನಾಧ್ಯಯನಕರ್ಮಾಣಿ ಯಜ್ಞಾದಿ ಚ ಕಥಂ ಪ್ರಭೋ ।
ಏತದಾಪ್ತಾಯ ಶಿಷ್ಯಾಯ ಮಹ್ಯಂ ಭೋ ವಕ್ತುಮರ್ಹಸಿ ॥

**ವ್ಯಾಸ ಉವಾಚ -**

ದೈತ್ಯಾನಾಂ ಸಾಹಸಾದೇವ ತಪೋ ಭವತಿ ನಿಶ್ಚಿತಮ್ ।
ವ್ರತಂ ಯಜ್ಞಾದಿಕಂ ಚೈವ ಸಂಪ್ರೀತಿಃ ಸ್ವಜನಸ್ಯ ಚ ॥

ಇಲ್ಲಿ ವೈಶಂಪಾಯನರು ವ್ಯಾಸರಿಗೆ ಪ್ರಶ್ನೆ ಮಾಡುತ್ತಿದ್ದಾರೆ. ವೈಶಂಪಾಯನರ ಪ್ರಶ್ನಾಭಿಪ್ರಾಯ ಇಷ್ಟು. ದೈತ್ಯರ ದೃಷ್ಟಿಯಲ್ಲಿ ದೇವರು ಸುಳ್ಳು, ಜಗತ್ತು ಸುಳ್ಳು, ಧರ್ಮಸುಳ್ಳು. ಹೀಗೆ ಸುಳ್ಳನ್ನೇ ಆರಾಧಿಸುವ ಅಸುರರು ಎಷ್ಟು ಪ್ರಯತ್ನ ಮಾಡಿದರೂ ದೇವತೆಗಳಾಗಲು ಸಾಧ್ಯವಿಲ್ಲ. ದೇವತಾಪದವಿಯನ್ನು ಪಡೆಯಲು ಸಾಧ್ಯವಿಲ್ಲ. ಇಂತಹ ಅಸುರರಿಗೆ ಭೋಗ್ಯವಾದ ಪದಾರ್ಥಗಳು, ಭೋಗದಿಂದ ಸುಖ, ಆರೋಗ್ಯ , ಬಲ, ಆಯುಷ್ಯ, ಕೀರ್ತಿ, ವಿದ್ಯೆ, ನೀತಿ, ದಾನ ಮೊದಲಾದವುಗಳು, ಯಜ್ಞಾದಿ ಸತ್ಕರ್ಮಗಳು ಹೇಗೆ ಸಿಗಲು ಸಾಧ್ಯ ? ಇದಕ್ಕೆ ವೇದವ್ಯಾಸದೇವರು ಕೊಡುವ ಉತ್ತರ ಚುಟುಕಾಗಿದ್ದರೂ ಚೊಕ್ಕಾದ ಉತ್ತರ. ಶ್ರೀಮದಾಚಾರ್ಯರು ತಮ್ಮ ಆಕರಗ್ರಂಥಗಳಲ್ಲಿ ಹೇಳಿದ ಉತ್ತರವೇ ಇಲ್ಲಿದೆ. ದೈತ್ಯರಿಗೆ ಇದೆಲ್ಲವೂ ಸ್ವಾಭಾವಿಕವಾಗಿ ಬರುವದಲ್ಲ. ಇಂತಹ ಪುಣ್ಯಸಂಗತಿಗಳು ತಪಸ್ಸಿಲ್ಲದೆ ಸಾಧ್ಯವಿಲ್ಲ. ತಪಸ್ಸು ಮಾಡಿ ವರ ಪಡೆದಾಗ ಮಾತ್ರ ಇದೆಲ್ಲ ಸಾಧ್ಯ . ಆ ತಪಸ್ಸೂ ಸ್ವಾಭಾವಿಕವಾದುದ್ದಲ್ಲ. ತಾತ್ಕಾಲಿಕವಾಗಿ ಸಕಾಮವಾಗಿ ಮಾಡಿದ ತಪಸ್ಸು. ಇಂತಹ ತಪಸ್ಸಿನಿಂದ ಪಡೆದ ವರದಿಂದಲೇ ಅಸುರರಿಗೆ ಬಲ, ಸುಖ, ಐಶ್ವರ್ಯ, ರೂಪ, ವಿದ್ಯೆ ಮುಂತಾದ ಗುಣಗಳು ತಾತ್ಕಾಲಿಕವಾಗಿ ಕಂಡುಬರುತ್ತವೆ.

ಹೀಗೆ ಶ್ರೀಮದಾಚಾರ್ಯರು ಹೇಳುವ ಅಪರೂಪದ ಅಸಂಖ್ಯವಿಷಯಗಳನ್ನು ಪುರಾಣೇತಿಹಾಸಗಳಲ್ಲಿ ಇಂದಿಗೂ ಕಾಣಬಹುದು.

**ಕದಂಬವೃಕ್ಷ**

ಕಾಲಿಯಮಥನಪ್ರಸಂಗ ತಾತ್ಪರ್ಯನಿರ್ಣಯದ ಹದಿಮೂರನೆಯ ಅಧ್ಯಾಯದಲ್ಲಿ ಬರುತ್ತದೆ. ಗರುಡನ ಹೊರತು ಇತರರಿಂದ ಸಹಿಸಲಾಗದ ವಿಷಬಲದಿಂದ ಕೂಡಿದ ಕಾಲಿಯ ಯಮುನೆಯ ಮಡುವಿನಲ್ಲಿ ವಾಸವಾಗಿದ್ದ. ಕಾಲಿಯನನ್ನು ದಮನ ಮಾಡುವದಕ್ಕಾಗಿ ಕೃಷ್ಣ ವಿಷಜಲದಲ್ಲಿ ಧುಮುಕುವದಕ್ಕಾಗಿ ದೊಡ್ಡದಾದ ಕದಂಬವೃಕ್ಷ ಏರಿದ. ಈ ಪ್ರಸಂಗದಲ್ಲಿ ಮಧುಸೂದನಭಿಕ್ಷುಗಳು ಒಂದು ಪ್ರಶ್ನೆ ಮಾಡಿಕೊಂಡು ಉತ್ತರಕೊಡುತ್ತಾರೆ.

'ಸಮಂತಾದ್ಯೋಜನಂ ಸಾಗ್ರಂ ದೇವೈರಪಿ ದುರಾಸದಮ್ ।
ವಿಷಾನಲೇನ ಘೋರೇಣ ಜ್ವಾಲಾಪ್ರಜ್ವಲಿತದ್ರುಮಮ್ ॥' 2.11.47

'ಹ್ರದಂ ಕಾಲೀಯನಾಗಸ್ಯ ದದರ್ಶಾತಿವಿಭೀಷಣಮ್ ।
ವಿಷಾಗ್ನಿನಾ ಪ್ರಸರತಾ ದಗ್ಧತೀರಮಹಾತರುಮ್ ॥' 5.7.3.

ಹರಿವಂಶ ಹಾಗೂ ವಿಷ್ಣುಪುರಾಣಗಳಲ್ಲಿಕಾಲಿಯನ ವಿಷಜ್ವಾಲೆಯಿಂದ ಸುತ್ತಲೂ ಒಂದು ಯೋಜನದ ವರೆಗೆ ಇರುವ ಮರಗಿಡಗಳು ಸುಟ್ಟುಹೋಗಿದ್ದವು ಎಂದು ಹೇಳುತ್ತಾರೆ. ಅಂದಮೇಲೆ ಮಡುವಿನ ಹತ್ತಿರ ಕದಂಬ ಹೇಗೆ ಉಳಿಯಲು ಸಾಧ್ಯ ? ಕೃಷ್ಣ ಮಡುವಿನಲ್ಲಿ ಧುಮುಕುವದಕ್ಕಾಗಿ ಕದಂಬವೃಕ್ಷವನ್ನು ಹತ್ತಿದ ಎಂಬ ಮಾತು ಅಸಮಂಜಸವಲ್ಲವೆ?

ಈ ಪ್ರಶ್ನೆಗೆ ಮಧುಸೂದನಭಿಕ್ಷುಗಳು ಸಂಪ್ರದಾಯದಲ್ಲಿ ಬಂದ ಉತ್ತರವನ್ನು ನೀಡುತ್ತಾರೆ.

*'ಪೂರ್ವಂ ಮಾತ್ರಾರ್ಥಂ ಅಮೃತಮಾದಾಯ ತನ್ಮಾರ್ಗಾದ್ಗಚ್ಛತೋ ಗರುಡಸ್ಯ ತದ್ವೃಕ್ಷೇ ಸ್ಥಿತ್ವಾ ಏತದ್ವೃಕ್ಷೇ ಅಮೃತಕಲಶಸ್ಪರ್ಶೇನಾಯಂ ವೃಕ್ಷ ಉರ್ವರಿತ' ಇತಿ ಸಂಪ್ರದಾಯವಿದಃ ।*

'ಒಮ್ಮೆ ಗರುಡ ಸರ್ಪಮಾತೆಯಾದ ಕದ್ರೂದೇವಿಗೆ ಅಮೃತವನ್ನು ಒಯ್ಯುವಾಗ ದಾರಿಯಲ್ಲಿ ಈ ಮರದ ಮೇಲೆ ಅಮೃತವನ್ನಿಟ್ಟು ಮೀನುಗಳನ್ನು ಬೇಟೆಯಾಡಿದ್ದ. ಆಗ ಆದ ಅಮೃತಸ್ಪರ್ಶದಿಂದ ಕದಂಬ ಮರ ಬದುಕಿ ಉಳಿದಿತ್ತು.' ಎಂದು ಸಾಂಪ್ರದಾಯಿಕವಾಗಿ ಹೇಳುತ್ತ ಬಂದ ಉತ್ತರ.

ಶ್ರೀಸತ್ಯಧರ್ಮತೀರ್ಥರು ಭಾಗವತಟಿಪ್ಪಣಿಯಲ್ಲಿ ಮಾತ್ಸ್ಯಪುರಾಣದ ಮೂಲಕ ಈ ಪ್ರಶ್ನೆಗೆ ಉತ್ತರವನ್ನು ನೀಡಿದ್ದಾರೆ.

'ಗೃಹೀತ್ವಾಮೃತಪಾತ್ರಂ ಹಿ ಗಚ್ಛನ್ಮಾರ್ಗೇ ಕ್ಷುಧಾರ್ದಿತಃ ।
ಕದಂಬೇ ಕಲಶಂ ನ್ಯಸ್ಯ ಯಮುನಾತೀರಗೋ ವಿರಾಟ್ ॥' ಇತಿ ಮಾತ್ಸ್ಯೇ ।

ವಿಷ್ಣುಪುರಾಣದ ಶ್ರೀಧರೀಯ ವ್ಯಾಖ್ಯಾನದಲ್ಲಿ ಎರಡು ತರಹದ ಉತ್ತರ ಕೊಟ್ಟಿದ್ದಾರೆ.

*'ಭಾವಿನಾ ಶ್ರೀಕೃಷ್ಣಚರಣಸ್ಪರ್ಶಭಾಗ್ಯೇನ ಸ ಏಕಸ್ತತ್ತೀರೇ ನ ಶುಷ್ಕ ಇತಿ ಜ್ಞಾತವ್ಯಮ್ । ಅಮೃತಮಾಹರತಾ ಗರುತ್ಮತಾ ಆಕ್ರಾಂತತ್ವಾದಿತಿ ಪುರಾಣಾಂತರಮ್'*

'ಮುಂದೆ ಶ್ರೀಕೃಷ್ಣನ ಪಾದಸ್ಪರ್ಶ ಹೊಂದುವ ಭಾಗ್ಯ ಇದ್ದುದರಿಂದ ಕದಂಬವೃಕ್ಷ ಒಣಗಿಹೋಗಲಿಲ್ಲ ಎಂದು ತಿಳಿಯಬಹುದು. ಅಥವಾ ಗರುಡ ತಂದ ಅಮೃತದ ಸ್ಪರ್ಶದಿಂದ ಬದುಕಿತ್ತು ಎಂದು ಪುರಾಣಾಂತರದಲ್ಲಿ ಹೇಳಿದ್ದಾರೆ' ಎಂದು ಉತ್ತರಕೊಡುತ್ತಾರೆ. ವಿಷ್ಣುಚಿತ್ತೀಯವ್ಯಾಖ್ಯಾನದಲ್ಲಿಯೂ ಎರಡನೆಯ ಉತ್ತರವನ್ನೇ ಕೊಟ್ಟಿದ್ದಾರೆ.

**ಹರಿಣಾಕ್ರೀಡನ**

ಒಮ್ಮೆಶ್ರೀಕೃಷ್ಣ ಗೋಪಬಾಲಕರ ಎರಡು ಗುಂಪುಗಳನ್ನು ಮಾಡಿದ. ಒಂದು ಕೃಷ್ಣನ ಗುಂಪು.ಇನ್ನೊಂದು ರಾಮನ ಗುಂಪು.ರಾಮನ ಗುಂಪಿನಲ್ಲಿ ಶ್ರೀದಾಮ ವೃಷಬ ಮುಂತದವರು.ಕೃಷ್ಣನ ಗುಂಪಿನಲ್ಲಿ

ಪ್ರಲಂಬಾಸುರ ಭದ್ರಸೇನ ಮುಂತಾದವರು. ಎರಡು ಗುಂಪುಗಳು ಸೇರಿ ಆಟ ಆಡುತ್ತಿದ್ದರು. ಸೋತವರು ಗೆದ್ದವರನ್ನು ಬೆನ್ನ ಮೇಲೆ ಹೊತ್ತು ಓಡಬೇಕು ಎಂದು ಆಟದ ನಿಯಮ. ಆಟದಲ್ಲಿ ಕೃಷ್ಣಪಕ್ಷದವರು ಗೆಲ್ಲತೊಡಗಿದರು. ಆದರೆ ಕೃಷ್ಣನ ಪಕ್ಷದಲ್ಲಿ ಸೇರಿದ ಪ್ರಲಂಬಾಸುರ ಮಾತ್ರ ಬಲರಾಮನಿಗೆ ಸೋತ. ಬಲರಾಮನ ಪಕ್ಷದಲ್ಲಿ ಬಲರಾಮನು ಮಾತ್ರ ಗೆದ್ದ. ಮಿಕ್ಕವರೆಲ್ಲ ಕೃಷ್ಣಪಕ್ಷದವರ ಜೊತೆ ಸೋತರು.

ಈ ಪ್ರಸಂಗದಲ್ಲಿ ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ'ಕೃಷ್ಣಸ್ಯ ಪಕ್ಷಿಷು ಜಯತ್ಸು' ಎಂದುಕೃಷ್ಣಪಕ್ಷದವರು ಗೆದ್ದಿದ್ದಾಗಿ ಹೇಳುತ್ತಾರೆ. ಇದು ಭಾಗವತಕ್ಕೆ ವಿರುದ್ಧವಾಗಿದೆ.

'ರಾಮಸಂಘಟ್ಟಿನೋ ಯೇ ಹಿ ಶ್ರೀದಾಮವೃಷಭಾದಯಃ ।
ಕ್ರೀಡಾಯಾಂ ಜಯಿನಸ್ತಾನ್ ತಾನ್ ಊಹುಃ ಕೃಷ್ಣಾದಯೋ ನೃಪ ॥

ಉವಾಹ ಕೃಷ್ಣೋ ಭಗವಾನ್ ಶ್ರೀದಾಮಾನಂ ಪರಾಜಿತಃ ।
ವೃಷಭಂ ಭದ್ರಸೇನಸ್ತು ಪ್ರಲಂಬೋ ರೋಹಿಣೀಸುತಮ್ ॥' ಭಾಗ.10.17.22-23 ।

ಭಾಗವತದಲ್ಲಿ ಶ್ರೀಕೃಷ್ಣ ಹಾಗು ಅವನ ಪಕ್ಷದವರು ಸೋತಿದ್ದಾಗಿ ಹೇಳಿದ್ದಾರೆ. ಆಚಾರ್ಯರು ಇಲ್ಲಿ'ಕೃಷ್ಣಪಕ್ಷದವರು ಗೆದ್ದರು' ಎಂದು ಹೇಳುತ್ತಾರೆ. ಆದ್ದರಿಂದ ಆಚಾರ್ಯರ ಮಾತು ಭಾಗವತವಿರುದ್ಧವಾಯಿತು.

ಇಲ್ಲಿ ಎರಡು ರೀತಿಯಾಗಿ ಭಾಗವತದ ವಿರೋಧವನ್ನು ತಿಳಿಯಬೇಕು. 'ಕೃಷ್ಣಪಕ್ಷದವರು ಸೋತರು' ಎಂಬುದು ಮೊದಲನೆಯ ರೀತಿ. 'ಕೃಷ್ಣ ಸೋತ' ಎಂಬುದು ಎರಡನೆಯ ರೀತಿ. ಈ ಎರಡು ತರಹದ ವಿರೋಧವನ್ನೂ ಭಾಗವತತಾತ್ಪರ್ಯದಲ್ಲಿ ಆಚಾರ್ಯರೇ ಪರಿಹರಿಸುತ್ತಾರೆ.

ಭಾಗವತದಲ್ಲಿಕೃಷ್ಣನ ಪಕ್ಷದವರು ಸೋತರೆಂದು ಹೇಳಿದಂತೆ ಕಾಣುತ್ತದೆ. ಆದರೆ ಅದು ಭಾಗವತದ ನಿಜವಾದ ಅಭಿಪ್ರಾಯವಲ್ಲ. ಹರಿವಂಶ ಹಾಗು ವಿಷ್ಣುಪುರಾಣಗಳಲ್ಲಿಶ್ರೀಕೃಷ್ಣನ ಪಕ್ಷದವರೇ ಗೆದ್ದುದ್ದಾಗಿ ಹೇಳಿದ್ದಾರೆ. ಆದ್ದರಿಂದ ಬಹುಪ್ರಮಾಣಗಳಲ್ಲಿ ಹೇಳಿದ ವಿಷಯವನ್ನು ಸ್ವೀಕರಿಸುವುದೇ ಉಚಿತ.'ಕೃಷ್ಣಪಕ್ಷದವರು ಸೋತರು' ಎಂಬ ಭಾಗವತದ ಹೇಳಿಕೆಯು ಅಸುರಮೋಹನಕ್ಕಾಗಿ ಎಂದು ತಿಳಿಯಬೇಕು.

ಇನ್ನು 'ಕೃಷ್ಣ ಪರಾಜಿತನಾದ' ಎಂಬ ಎರಡನೆಯ ವಿಷಯದಲ್ಲಿ ಬಂದ ವಿರೋಧವನ್ನು ಪರಿಹರಿಸುವ ಕ್ರಮವನ್ನು ತಿಳಿಯೇಣ.

ಬಹುಮಾನವಿರೋಧೇ ತು ವ್ಯತ್ಯಾಸಃ ಶಬ್ದತೋಽರ್ಥತಃ ।
ಕಾರ್ಯೋಽನಿರುಕ್ತದೇವಾನಾಂ ಗುಣಸಿದ್ಧ್ಯೈ ನ ಚಾನ್ಯಥಾ ॥

ವಿಷ್ಣುರ್ಬ್ರಹ್ಮ ತಥಾ ವಾಯುರನಿರುಕ್ತಾಃ ಪ್ರಕೀರ್ತಿತಾಃ ।
ತತ್ತತ್ಸ್ವಶ್ಚೇತರಗುಣಾ ವ್ಯತ್ಯಸ್ಯಾಸ್ತೇಷ್ವಸಂಶಯಃ ॥ ಇತಿ ಬ್ರಹ್ಮತರ್ಕೇ

೧. ಹರಿವಂಶ ಹಾಗು ವಿಷ್ಣುಪುರಾಣಗಳಲ್ಲಿ 'ಶ್ರೀದಾಮಮಜಯತ್ ಕೃಷ್ಣಃ' 'ಶ್ರೀದಾಮಾನಂ ತತಃ ಕೃಷ್ಣಃ..ಜಿತವಾನ್' ಎಂದು 'ಕೃಷ್ಣನೇ ಗೆದ್ದ' ಎಂದು ಹೇಳಿದ್ದಾರೆ. ಅವುಗಳ ವಿರೋಧ ಬರುವದರಿಂದ

ಭಾಗವತದಲ್ಲಿ 'ಕೃಷ್ಣ ಸೋತ' ಎಂದು ಹೇಳಿದರೂ ಅದು ಗ್ರಾಹ್ಯವಲ್ಲ. ಹರಿವಂಶಾದಿ ಬಹುಪ್ರಮಾಣಗಳಿಗನುಗುಣವಾಗಿ ಭಾಗವತಕ್ಕೆ ಬೇರೆ ಅರ್ಥವನ್ನು ಮಾಡಿ ಹೊಂದಿಸಬೇಕು.

ಆಚಾರ್ಯರ ಅಭಿಪ್ರಾಯ ಇಷ್ಟು. ದೇವರು ಹಾಗು ಲಕ್ಷ್ಮೀಬ್ರಹ್ಮವಾಯುಸರಸ್ವತೀಭಾರತಿಯರು ಅನಿರುಕ್ತದೇವತೆಗಳು. ಈ ಮಹಾದೇವತೆಗಳ ಮಹಿಮೆಗೆ ಕುಂದು ಬರುವಂತೆ, ಬಹುಪ್ರಮಾಣಗಳಿಗೆ ವಿರುದ್ಧವಾದ ಪ್ರಮೇಯವನ್ನು ಹೇಳುವ, ವೇದಾನುಸಾರಿಯಾದ ಗ್ರಂಥದ ಅನೇಕ ವಚನಗಳು ಪುರಾಣಗಳಲ್ಲಿ ಕಂಡುಬರುತ್ತವೆ. ಆದರೆ ಆ ವಚನಗಳನ್ನು ಆ ಅರ್ಥದಲ್ಲಿ ಪ್ರಮಾಣ ಎಂದು ಪರಿಗಣಿಸಬಾರದು. ಬಹುಪ್ರಮಾಣಗಳಿಗನುಗುಣವಾಗಿ ಆ ವಚನಗಳಲ್ಲಿ ಶಬ್ದವ್ಯತ್ಯಾಸ, ಅರ್ಥವ್ಯತ್ಯಾಸ ಮಾಡಿ ಭಗವಂತನ ದೇವತೆಗಳ ಮಹಿಮೆಗೆ ಕುಂದು ಬಾರದಂತೆ ಆ ವಚನಗಳನ್ನು ಹೊಂದಿಸಿಕೊಳ್ಳಬೇಕು. ವೇದಾನುಸಾರಿಯಾಗದ ಗ್ರಂಥಗಳಲ್ಲಿರುವ ವಚನಗಳನ್ನು ಅಪ್ರಮಾಣ ಎಂದು ಕೈಬಿಡಬೇಕು.

ಭಾಗವತ ವೇದಾನುಸಾರಿಯಾದ ಗ್ರಂಥ. ಆದ್ದರಿಂದ 'ಉವಾಹ ಕೃಷ್ಣೋ ಭಗವಾನ್ ಶ್ರೀದಾಮಾನಂ ಪರಾಜಿತಃ' ಎಂಬ ಭಾಗವತ ವಚನದಲ್ಲಿ ಶಬ್ದವ್ಯತ್ಯಾಸ ಅರ್ಥವ್ಯತ್ಯಾಸ ಮಾಡಬೇಕು. 'ಕೃಷ್ಣೋ ಭಗವಾನ್' ಎಂಬಲ್ಲಿರುವ ಪ್ರಥಮಾವಿಭಕ್ತಿಯನ್ನು ದ್ವಿತೀಯಾವಿಭಕ್ತಿಯಾಗಿ ವ್ಯತ್ಯಾಸ ಮಾಡಬೇಕು. 'ಶ್ರೀದಾಮಾನಂ' ಎಂಬಲ್ಲಿರುವ ದ್ವಿತೀಯಾವಿಭಕ್ತಿಯನ್ನು ಪ್ರಥಮಾವಿಭಕ್ತಿಯಾಗಿ ವ್ಯತ್ಯಾಸ ಮಾಡಿಕೊಳ್ಳಬೇಕು. ಆಗ 'ಶ್ರೀದಾಮಾ ಪರಾಜಿತಃ ಭಗವಂತಂ ಶ್ರೀಕೃಷ್ಣಂ ಉವಾಹ' ಎಂದು ವಾಕ್ಯವನ್ನು ಯೋಜನೆ ಮಾಡಿಕೊಳ್ಳಬೇಕು. ಈ ರೀತಿ ಯೋಜಿಸಿದಾಗ 'ಶ್ರೀದಾಮ ಪರಾಜಿತನಾಗಿ ಶ್ರೀಕೃಷ್ಣನನ್ನು ಹೊತ್ತುಕೊಂಡ' ಎಂದು ಅರ್ಥದಲ್ಲಿಯೂ ಬದಲಾವಣೆ ಆಗುತ್ತದೆ. ಈ ರೀತಿಯಾಗಿ ಶಬ್ದವ್ಯತ್ಯಾಸ, ಅರ್ಥವ್ಯತ್ಯಾಸಗಳನ್ನು ಮಾಡಿಕೊಂಡು ಹರಿವಂಶವಿಷ್ಣುಪುರಾಣಗಳಿಗೂ ಭಾಗವತಕ್ಕೂ ತೋರುವ ವಿರೋಧವನ್ನು ಪರಿಹರಿಸಿ ಕೋಳ್ಳಬೇಕು.

ಹೀಗೆ ಇತಿಹಾಸಪುರಾಣಗಳಲ್ಲಿಯ ಕಥೆಗಳಲ್ಲಿ ಅತಿಚಿಕ್ಕದಾದ ಪ್ರಸಂಗವೂ ಭಗವಂತನ ಹಿರಿಮೆಗೆ ದೇವತೆಗಳ ಗರಿಮೆಗೆ ಕುಂದುಬಾರದೆ ಇರುವಂತೆ ಹೊಂದಿಸುವ ಹಂಬಲವನ್ನು ಆಚಾರ್ಯರಲ್ಲಿ ನಾವು ಕಾಣಬಹುದು.

ಆಚಾರ್ಯರು ಪ್ರಮಾಣವಚನಗಳ ಬೆಳಕಿನಲ್ಲಿ ಈ ಶಬ್ದವ್ಯತ್ಯಾಸ, ಅರ್ಥವ್ಯತ್ಯಾಸ ಇತ್ಯಾದಿಗಳನ್ನು ಮಾಡುವುದು ಕೇವಲ ತತ್ತ್ವದ, ಸಿದ್ಧಾಂತದ ಸಂರಕ್ಷಣೆಗಾಗಿ. ಇದೇ ತರಹದ ಅನೇಕಪ್ರಸಂಗಗಳನ್ನು ಪಾಶ್ಚಾತ್ಯರಕಾವ್ಯಗಳಲ್ಲಿಯೂ ನಾವು ಕಾಣಬಹುದು.

**ಪಾಶ್ಚಾತ್ಯರ ಆದಿಕಾವ್ಯಸಂಪಾದಕರಲ್ಲಿಯೂ ತತ್ತ್ವಸಂರಕ್ಷಣೆಯ ಅಭಿರುಚಿ**

ಗ್ರೀಕ್ ಸಾಹಿತ್ಯದ ಆದಿಕಾವ್ಯಗಳು ಇಲಿಯಡ್ ಮತ್ತು ಒಡೆಸ್ಸಿ. ಇವುಗಳನ್ನು ಹೋಮರ್ ಎಂಬ ಕವಿ(ಕ್ರಿ.ಪೂ.೮೫೦) ರಚಿಸಿದ. ಈಜಿಪ್ಟ ದೇಶದ ದೊರೆ ಟಾಲೆಮಿ ಒಂದು ಪುಸ್ತಕಭಂಡಾರವನ್ನು ಸ್ಥಾಪಿಸದ್ದ. ಟಾಲೆಮಿಯ ಆಸ್ಥಾನದಲ್ಲಿ ಜೀನೋಡೊಟೋಸ್ (Zenodotos) ಎಂಬ ಪ್ರಸಿದ್ಧ ವಿದ್ವಾಂಸನಿದ್ದನು. ಇವನು ವ್ಯಾಕರಣಶಾಸ್ತ್ರದಲ್ಲಿ ಪ್ರವೀಣ. ಇಲಿಯಡ್ ಮತ್ತು ಒಡೆಸ್ಸಿ ಕಾವ್ಯಗಳನ್ನು ಪ್ರಾಚೀನಹಸ್ತಪ್ರತಿಗಳ ಆಧಾರದ ಮೇಲೆ ಪರಿಷ್ಕರಿಸಿ ಸಂಪಾದಿಸಿದನು. ಸಂಪಾದನ ಮಾಡುವಾಗ ಕಾವ್ಯಗಳಲ್ಲಿ ಪ್ರಕೃತಸನ್ನಿವೇಶಕ್ಕೆ

ಹೊಂದಿಕೊಳ್ಳದಿರುವ, ದೇವತೆಗಳಾಗಲಿ ಮನುಷ್ಯರಾಗಲಿ ಮಾತಾಡುವಾಗ, ಕಾರ್ಯ ಮಾಡುವಾಗ ಅವರ ಯೋಗ್ಯತೆಗೆ ಅನುಚಿತವೆಂದು ತೋರುವ ಸನ್ನಿವೇಶದ ವಾಕ್ಯಗಳಿದ್ದರೆ ಅವುಗಳನ್ನು ಪ್ರಕ್ಷಿಪ್ತ ಎಂದು ಪರಿಗಣಿಸುತ್ತಿದ್ದ. ಅಂತಹ ಒಂದು ಪ್ರಸಂಗವನ್ನು ಈಲಿಯಡ್ ಕಾವ್ಯದಲ್ಲಿ ಕಾಣಬಹುದು. ಈಲಿಯಡ್ಡಿನ ಮೂರನೆಯ ಪರಿಚ್ಛೇದದ ೪೨೩-೪೨೬ ವರೆಗಿನ ಮೂರು ಪಂಕ್ತಿಗಳಲ್ಲಿಬರುವ ಪ್ರಸಂಗ.

> .....When they reached Paris' fine house, her handmaids returned swiftly to their tasks, but the fair lady went to her high-roofed chamber. There laughter-loving Aphrodite placed a chair for her, facing Paris, and Helen, daughter of aegis-bearing Zeus, sat with averted gaze berating her lover,....

ದೇವತೆಯಾದ ಅಬ್ದಯಿತೆ (Aphrodite) ಹೆಲನ್(Helen) ಎಂಬ ಮನುಷ್ಯಮಾತ್ರಳಿಗೆ ಕೂಡುವದಕ್ಕೆ ತನ್ನ ಕೈಯಿಂದಲೇ ಮಣೆ ಹಾಕುತ್ತಾಳೆ. ಇದು ಕಾವ್ಯದಲ್ಲಿ ಬರುವ ಚಿಕ್ಕ ಸನ್ನಿವೇಶ. ಆದರೂ ಜೇನೋಡೊಟೋಸ್‌ನು ಇದು ಈಲಿಯಡ್ ಕಾವ್ಯದ್ದು ಎಂದು ಒಪ್ಪಲಿಲ್ಲ.

ಕಾರಣ, ಜೇನೋಡೊಟೋಸ್‌ನು ದೇವತೆಗಳು ಮಾನವನಿಗೆ ಗೌರವಿಸುವುದು ಅನುಚಿತ, ತಾರತಮ್ಯಕ್ಕೆ ವಿರುದ್ಧ ಎಂಬ ಸಂಸ್ಕೃತಿಯನ್ನು, ತತ್ವವನ್ನು ನಂಬಿದ್ದ. ಹೀಗಾಗಿ ಈಲಿಯಡ್ಡಿನಲ್ಲಿ ಬರುವ ಪ್ರಸಂಗ ಸಂಸ್ಕೃತಿಗೆ ವಿರುದ್ಧವಾದುದ್ದರಿಂದ ಇಂತಹ ಸನ್ನಿವೇಶದ ಮಾತುಗಳನ್ನು ಪ್ರಕ್ಷಿಪ್ತ ಎಂದು ಪರಿಗಣಿಸಿದ.

ಹೀಗೆ ಜೇನೋಡೊಟೋಸ್ ಮೂರುಸಾವಿರ ವರ್ಷಗಳ ಹಿಂದೆ ಒಬ್ಬ ಮಾನವನು ರಚಿಸಿದ ಕಾವ್ಯದಲ್ಲಿ ದೇವರ, ದೇವತೆಗಳ ಮಹಿಮೆಯನ್ನು ಕುಂದಿಸುವ ಮಾತುಗಳನ್ನು ಪ್ರಕ್ಷಿಪ್ತ ಎಂದು ನಿರ್ಣಯಿಸಿಬಿಟ್ಟ.

ಹೀಗಿರುವಾಗ ಸರ್ವಜ್ಞಶಿಖಾಮಣಿಯಾದ ಭಗವಂತನ ಮುಖದಿಂದ ಬಂದಿವೆ ಮಹಾಭಾರತ, ಪಂಚರಾತ್ರ, ಮೂಲರಾಮಾಯಣ, ಭಾಗವತಾದಿ ಪುರಾಣಗಳು. ಅನಾದಿಯಾದ ಅಪೌರುಷೇಯವಾದ ವೇದಗಳಲ್ಲಿರುವ ಸಿದ್ಧಾಂತವನ್ನೇ ಪ್ರತಿಪಾದಿಸುತ್ತವೆ ಈ ಎಲ್ಲ ಗ್ರಂಥಗಳು. ಇಂತಹ ಗ್ರಂಥಗಳಲ್ಲಿ ಅಲ್ಲಲ್ಲಿ ಮೇಲ್ನೋಟಕ್ಕೆ ಸಿದ್ಧಾಂತವಿರೋಧಿಯಾದ ತತ್ವಗಳು ಹೇಳಿದಂತೆ ಕಾಣುತ್ತದೆ. ಅದಕ್ಕಾಗಿಯೇ ಅಪ್ರಬುದ್ಧರು ಸಿದ್ಧಾಂತವಿರೋಧಿಯಾದ ತತ್ವಗಳನ್ನು ತಪ್ಪಾಗಿ ತಿಳಿದು ಎಡವಿ ಬೀಳುತ್ತಾರೆ. ಇಂತಹ ಅಪಾರ್ಥದಿಂದಾಗುವ ಅನರ್ಥವನ್ನು ಪರಿಹರಿಸಲು ಆಚಾರ್ಯರು ಭಾರತಪುರಾಣಮೊದಲಾದವುಗಳನ್ನು ಅರ್ಥೈಸುವುದಕ್ಕೆ ಭಾಷಾತ್ರಯ, ಪುರುಷವ್ಯತ್ಯಾಸ, ಕಾಲವ್ಯತ್ಯಾಸ, ಶಬ್ದವ್ಯತ್ಯಾಸ, ಅರ್ಥವ್ಯತ್ಯಾಸ, ಅಸುರಮೋಹನ, ಕಲ್ಪಭೇದ ಮುಂತಾದ ನೂರಾರು ರೀತಿಗಳನ್ನು, ಸಮನ್ವಯಪ್ರಕಾರಗಳನ್ನು ತಿಳಿಸಿ ಕೊಟ್ಟದ್ದು ಆಶ್ಚರ್ಯವಲ್ಲ ಮಾತ್ರವಲ್ಲ. ಆಚಾರ್ಯರು ಕೈಗೊಂಡ ಈ ಉಪಾಯಗಳು ವೇದವ್ಯಾಸದೇವರ ವಾಙ್ಮಯಪ್ರಪಂಚವನ್ನೂ ಅಂತರಂಗವನ್ನು ಸಂರಕ್ಷಿಸುವ ಅಂಗರಕ್ಷಕರಂತೆ ಇವೆ.

ಈ ರೀತಿ ಆಚಾರ್ಯರು ಭಗವಂತನ ಮಹಾಮಹಿಮೆಗೆ, ದೇವತೆಗಳ ಮಹಿಮೆಗೆ, ತತ್ವಕ್ಕೆ ಧಕ್ಕೆಯಾಗದಂತೆ ಪ್ರಮಾಣಶುದ್ಧವಾದ ಶೈಲಿಯಲ್ಲಿ ಕಥೆಯನ್ನೂ, ತತ್ವಗಳನ್ನೂ, ಸೈದ್ಧಾಂತಿಕ ಸಂದೇಶಗಳನ್ನು ನಮಗೆ ತಿಳಿಸಿಕೊಡುತ್ತಾರೆ. ಹೀಗೆ ಅಗಾಧವಾದ ಶಬ್ದರಾಶಿಯ ಒಳಹೊರಮ್ಮೆನ್ನು ತೀಡಿ ಜಗತ್ತಿಗೆ ಜ್ಞಾನಭಾಂಡಾರವನ್ನು ನೀಡಿ ಮಹೋಪಕಾರ ಮಾಡಿದ ಆಚಾರ್ಯರಿಗೆ ಇಡೀ ಪ್ರಪಂಚವೇ ಕೃತಜ್ಞತೆಯಿಂದ ತಲೆಬಾಗಿಸಬೇಕು.

**'ಚಾಪಲಾಯ ಪ್ರಚೋದಿತಃ'**

ಈ ಬೃಹದ್ಗ್ರಂಥದ ಸಂಶೋಧನೆ ಮಾಡುವಾಗ ಮನದಾಳದಲ್ಲಿ ಹುದುಗಿದ ಕೆಲಸಂಗತಿಗಳು ನೆನಪಿಗೆ ಬರುತ್ತವೆ. ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಮಾತು. ಸತ್ಯಧ್ಯಾನವಿದ್ಯಾಪೀಠದಲ್ಲಿ ಪಂ.ಗುತ್ತಲ ಸರ್ವಜ್ಞಾಚಾರ್ಯರ (ಮಹಾಸ್ವಾಮಿಗಳ ಪೂರ್ವಾಶ್ರಮ) ಹತ್ತಿರ ಸಾಹಿತ್ಯ, ವ್ಯಾಕರಣ ಒದುವ ಪ್ರಸಂಗ. ಸರ್ವಜ್ಞಾಚಾರ್ಯರು ಪೂ.ಮಾಹುಲೀಆಚಾರ್ಯರ ಹತ್ತಿರ ನ್ಯಾಯಾಮೃತ ಅಧ್ಯಯನ ಮಾಡುವ ಕಾಲ. ಇನ್ನೂ ಚಿಕ್ಕವರಾದ ನಮಗೆ ಪೂ.ಆಚಾರ್ಯರನ್ನು ಕಂಡರೆ ಗೌರವಮಿಶ್ರಿತವಾದ ಭಯ. ಪೂ.ಆಚಾರ್ಯರ ನಡೆನುಡಿಗಳನ್ನು ಅರ್ಥಮಾಡಿಕೊಳ್ಳುವ ಪ್ರೌಢಿಮೆಯೂ ಇರಲಿಲ್ಲ. ಈ ಎಲ್ಲ ವಿಚಾರಗಳನ್ನು ಹಂಚಿಕೊಳ್ಳುವಷ್ಟು ಸಲಿಗೆಯಂತೂ ಇರಲೇ ಇಲ್ಲ. ಅವರ ಸಾನ್ನಿಧ್ಯದಲ್ಲಿರುವಾಗ ಒಬ್ಬ ಮಹಾಪುರುಷನ ಮಡಿಲಲ್ಲಿ ನೆಮ್ಮದಿಯಾಗಿದ್ದ ಅನುಭವವಂತೂ ಸಾಕ್ಷಿಸಿದ್ಧ. ಹೀಗಿರುವಾಗ ನಮ್ಮ ಮುಪ್ಪುರಿದ ಪುಣ್ಯದಿಂದ ಗುರುಗಳಾಗಿ ದೊರೆತರು ಸರ್ವಜ್ಞಾಚಾರ್ಯರು. ಅದರಿಂದಾಗಿ ಪೂ.ಆಚಾರ್ಯರ ನೇರ ಸಂಪರ್ಕವಿರದಿದ್ದರೂ ಅವರ ಎಷ್ಟೋ ಸಂಕಲ್ಪಗಳು, ಧ್ಯೇಯಧೋರಣೆಗಳು ನಮ್ಮ ಪಕ್ವತೆಗೆ ಅನುಗಣವಾಗಿ ಮನಸ್ಸಿನಾಳದಲ್ಲಿ ಬೇರೂರಿದವು. ಅವುಗಳಲ್ಲಿ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದ ಪರಿಷ್ಕೃತವಾದ ಸಂಶೋಧನೆ, ಪುರಾಣಗಳಲ್ಲಿ ಬರುವ ಪ್ರಮಾಣವಾಕ್ಯಗಳಿಂದ ಆಚಾರ್ಯರ ಮಾತನ್ನು ಸಮರ್ಥಿಸುವ ಹಿರಿದಾದ ಸಂಕಲ್ಪವೂ ಒಂದು. ನಮ್ಮ ಪಾಠಪ್ರಾರಂಭವಾಗುವ ಸಮಯ ಪ್ರಾತಃ ನಾಲ್ಕು ಮುಕ್ಕಾಲು. ಗ್ರಂಥಗಳ ಪಾಠ ಮಾಡುವಾಗ ಅನೇಕಪ್ರಸಂಗಗಳಲ್ಲಿ ಸರ್ವಜ್ಞಾಚಾರ್ಯರು ಹೇಳಿದ ಮಾತು. 'ನೀವೆಲ್ಲ ಪ್ರತಿನಿತ್ಯ ತಾತ್ಪರ್ಯನಿರ್ಣಯದ ೫೦ಶ್ಲೋಕಗಳಾದರೂ ಪಾರಾಯಣ ಮಾಡಬೇಕು'. ಅವರ ಆಜ್ಞೆಯಂತೆ ಪಾರಾಯಣ ಮಾಡಿದೆವು. ಅವರ ಆ ಮಾತಿನ ಹಿನ್ನೆಲೆ ಬಹಳ ದೊಡ್ಡದಾಗಿತ್ತು. ಪ್ರತಿನಿತ್ಯ ಪೂ.ಮಾಹುಲೀಆಚಾರ್ಯರು ತಮ್ಮ ಪಾಠಕಾಲದಲ್ಲಿ ಹೇಳಿದ ತಾತ್ಪರ್ಯನಿರ್ಣಯದ ಮಹತ್ವ, ಅದರ ಮಹಿಮೆಗಳು, ಆ ಗ್ರಂಥದ ವೈಭವ, ಸಂಶೋಧನೆಯ ಕ್ರಮ, ಆಚಾರ್ಯರು ಆಡಿದ ಪ್ರತಿಯೊಂದು ಮಾತನ್ನು ನಾವು ಹೇಗೆ ಸಮರ್ಥನೆ ಮಾಡಬೇಕು? ಆಚಾರ್ಯರ ಗ್ರಂಥದ ಮೇಲೆ ಆಧುನಿಕರು ಮಾಡುವ ಆಕ್ಷೇಪಗಳು. ಅವುಗಳಿಗೆ ಸಮಾಧಾನ ಇತ್ಯಾದಿ ಇತ್ಯಾದಿ ನೂರಾರು ವಿಷಯಗಳನ್ನು ಪಾಠದ ಸಂದರ್ಭದಲ್ಲಿ ಚರ್ಚೆ ಮಾಡಬೇಕು. ಆ ಹಿರಿದಾದ ಉದ್ದೇಶಕ್ಕಾಗಿ ನಮ್ಮನ್ನು ಸನ್ನದ್ಧರನ್ನಾಗಿ ಮಾಡುವದಕ್ಕಾಗಿ ಮಹಾಸ್ವಾಮಿಗಳು ಅಂದೇ ಸಂಕಲ್ಪಮಾಡಿ ಆ ಮಾತನ್ನು ಹೇಳಿದ್ದರು.

ಈ ರೀತಿ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಮಹಾಗುಣಗಳನ್ನು ಗುರುಮುಖದಿಂದ ಕೇಳಿದಾಗ ಮನಸ್ಸಿನಲ್ಲಿ ಸಂಶೋಧನೆಯ ಸಂಕಲ್ಪ ಅಂಕುರವಾಯಿತು. ಮುಂದೆ ಉದ್ಗ್ರಂಥದ ಅಧ್ಯಯನದ ಭರದಲ್ಲಿ ಆಚೆ ಅಷ್ಟು ಗಮನ ಕೊಡಲಾಗಲಿಲ್ಲ. ಮುಂದೆ ಪ್ರೌಢರಾದಾಗ ಪೂ.ಆಚಾರ್ಯರೇ ಖುದ್ದಾಗಿ ಎಲ್ಲ ವರ್ಗದವರನ್ನು ಹಾಗೂ ತಮ್ಮ ಕುಟುಂಬದವರನ್ನು ಕೂಡಿಸಿ ತಾತ್ಪರ್ಯನಿರ್ಣಯದ ಪ್ರತ್ಯಕ್ಷರ ಪಾಠ ಹೇಳುವ ವಾಡಿಕೆಯನ್ನು ಹಾಕಿದರು. 'ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ ಮಹಾವಿದ್ವಾಂಸರೂ ಪರಿಶ್ರಮಪಟ್ಟು ಅಧ್ಯಯನ ಮಾಡಬೇಕಾದ ಗಂಭೀರವಾದ ಗ್ರಂಥ. ಇದರ ಉಪೇಕ್ಷೆ ಸರಿಯಲ್ಲ' ಅನ್ನುವದಕ್ಕಾಗಿ ಆಚಾರ್ಯರೇ ಪಾಠ ಹೇಳುವ ಸಂಪ್ರದಾಯ ಹಾಕಿದರು. ಪಾಠದ ಕಾಲದಲ್ಲಿ

ಶ್ರೀಮದಾಚಾರ್ಯರ ಈ ಮಾತುಗಳಿಗೆ ಸಂವಾದಿಯಾದ ಪ್ರಮಾಣಗಳು ಪುರಾಣಗಳಲ್ಲಿ ಇವೆಯೊ? ಅಥವಾ ಅವರೇ ಕಲ್ಪಿಸಿ ಹೇಳಿದ ಮಾತುಗಳಾ ಇವು? ಇತ್ಯಾದಿ ವಿಮರ್ಶೆಗಳು ತಲೆ ಕೆಡಿಸಿದ್ದುಂಟು. ತಾತ್ಕಾಲಿಕವಾಗಿ ಪುರಾಣಗಳ ಕೆಲ ಭಾಗಗಳೂ ಕೆದರಿದ್ದಾಯಿತು.

ಯಾವ ಪ್ರಯೋಜನವೂ ಆಗಲಿಲ್ಲ . ಮುಂದೆ ದಾರಿಕಾಣದೆ ಕೈಚಲ್ಲಿ ಕುಳಿತದ್ದಾಯಿತು.ಮುಂದೆ ಕೆಲ ಕಾಲ ಕಳೆದಮೇಲೆ ಒಂದು ಸುಸಂದರ್ಭ ಒದಗಿ ಬಂತು. ೨೦೦೦ನೆಯ ಈಸವಿಯ ಚಾತುರ್ಮಾಸ್ಯ. ಪೂ.ಆಚಾರ್ಯರು ಚಾತುರ್ಮಾಸ್ಯದಲ್ಲಿ ಸಮಗ್ರವಾದ ಮಹಾಭಾರತ ಪ್ರವಚನವನ್ನು ಹೇಳುವ ಸಂಕಲ್ಪಮಾಡಿದರು. ಪ್ರತಿನಿತ್ಯ ಮೂರು ನಾಲ್ಕು ಘಂಟೆಗಳ ಕಾಲ ಮಹಾಭಾರತದ ಪ್ರವಚನ ನಡೆತಿತ್ತು. ಆ ಸಮಯದಲ್ಲಿ ಸಮಗ್ರವಾದ ಮಹಾಭಾರತ ಅಧ್ಯಯನ ಮಾಡಿದ್ದಾಯಿತು. ಸಾಯಂಕಾಲ ಪ್ರವಚನ ಮುಗಿದಮೇಲೆ ರಾತ್ರಿ ಪೂ.ಆಚಾರ್ಯರ ಸನ್ನಿಧಿಯಲ್ಲಿ ಅವರ ಕಾಲು ಒತ್ತುವದಕ್ಕೆ ಹೋಗುವ ವಾಡಿಕೆ. ಆ ಸಮಯದಲ್ಲಿ ಅವತ್ತಿನ ಪ್ರವಚನದಲ್ಲಿ ಬಂದ ವಿಷಯಗಳ ಮೇಲೆ ಚರ್ಚೆ ಆಗಬೇಕು. ಆ ಪ್ರಸಂಗದಲ್ಲಿ ಮಹಾಭಾರತದಲ್ಲಿರುವ ಶ್ಲೋಕಕ್ಕೆ ಆಚಾರ್ಯರು ವ್ಯಾಖ್ಯಾನಮಾಡುವ ಕ್ರಮವನ್ನು ತೋರಿಸಿಕೊಡುತ್ತಿದ್ದರು. ಮೂಲಗ್ರಂಥಗಳಲ್ಲಿರುವ ಮಾತುಗಳನ್ನು ಶ್ರೀಮದಾಚಾರ್ಯರು ಸಂಗ್ರಹಮಾಡುವ ಅದ್ಭುತವಾದ ಕ್ರಮ, ವಿರೋಧಪರಿಹಾರಮಾಡುವ ಬಗೆ, ಶುದ್ಧಪಾಠಗಳ ವಿಮರ್ಶೆ, ವೈದಿಕಪದಪ್ರಯೋಗಗಳ ವಿಚಾರ, ಆಧುನಿಕವಿದ್ವಾಂಸರು ಮಾಡುವ ಆಕ್ಷೇಪಗಳು ಹಾಗೂ ಅವುಗಳಿಗೆ ಉತ್ತರಿಸುವ ಕ್ರಮ ಹೀಗೆ ನೂರಾರು ವಿಷಯಗಳ ಕುರಿತಾಗಿ ಚರ್ಚೆಯಾಗಬೇಕು. ನೂರಾರು ಬಾರಿ ರಾತ್ರಿ ೨ಗಂಟೆ ೩ಗಂಟೆ ವರೆಗೂ ಕುಳಿತಿದ್ದುಂಟು. ಆ ಕಾಲದಲ್ಲಿ ಸಮಗ್ರವಿಶ್ವದಲ್ಲಿರುವ ಎಲ್ಲ ವಿಚಾರಧಾರೆಗಳ ವಿಷಯಕವಾಗಿ ವಿಚಾರವಿನಿಮಯವಾಗಬೇಕು. 'ಯದಿಹಾಸ್ತಿ ತದನ್ಯತ್ರ' ಎನ್ನುವ ಮಾತಿನ ಅರ್ಥ ನಿಜವಾಗಿ ತಿಳಿದಿದ್ದೆ ಆಗ. ಶ್ರೀಮದಾಚಾರ್ಯರು ಹೇಳಿದ ವಿಷಯಗಳಿಗೆ ಸಂವಾದಿಯಾದ ಪ್ರಮಾಣಗಳು ಮಹಾಭಾರತದಲ್ಲಿ ಸಿಕ್ಕಾಗ, ಟೀಕಾಕೃತ್ಪಾದರು ಶ್ರೀಮದಾಚಾರ್ಯರ ಕುರಿತಾಗಿ ಉದ್ಘೋಷಿಸಿದ 'ಶುದ್ಧಂ ಪ್ರಮಾಣಂ ಸ ಮೇ'ಎಂಬ ಮಾತಿನ ಆಳದ ಅರಿವು ಮೂಡಿತು. ಈ ರೀತಿ ಅನೇಕವರ್ಷಗಳಿಂದ ಈ ಸಂಶೋಧನಸೌಧ ಮೂರ್ತರೂಪ ಪಡೆಯುವ ಹಂತಕ್ಕೆ ಬಂದು ತಲುಪಿತು. ಮುಂದೆ ೨೦೦೨ಇಸವಿಯಲ್ಲಿ ನಮ್ಮ ವರ್ಗದವರ ಸುಧಾಮಂಗಳ ಪ್ರಸಂಗ. ಸುಧಾಮಂಗಳದ ಮಾರೆಯ ದಿನ ಗುರುಗಳು, ನಾವು ಗುರುದಕ್ಷಿಣೆಯಾಗಿ ಕೊಟ್ಟ ಚಿನ್ನದ ಪೀಠಪ್ರಭಾವಳಿಯನ್ನು ನೋಡಿ 'ತುಂಬ ಚನ್ನಾಗಿದೆ' ಎಂದು ಹೇಳಿದರು. ಆಮೇಲೆ 'ನೀವು ಸಮಗ್ರವಾದ ಮಹಾಭಾರತತಾತ್ಪರ್ಯನಿರ್ಣಯದ ಸಂಶೋಧನೆ ಮಾಡಬೇಕು. ಇದೇ ನಿಜವಾದ ಗುರುದಕ್ಷಿಣೆ.' ಎಂದು ಹೇಳಿದರು. ಗುರುಗಳ ಈ ಆದೇಶವೇ ಸಂಶೋಧನೆಗೆ ನಾಂದಿಯಾಯಿತು. ಅದರ ಮುಂದೆ ನಡೆದದ್ದು ತಮ್ಮೆಲ್ಲರಿಗೂ ಪ್ರತ್ಯಕ್ಷಸಿದ್ಧ.

**ಕ್ಷಾಮ್ಯಂತು ಮೇ ಹಂತ ಮುಹುರ್ಮಹಾಂತಃ**

ಆಚಾರ್ಯರ ಪ್ರತಿಯೊಂದು ವಚನವೂ ಗಿರಿಶಗರುಡಾದಿ ಉರುದೇವತೆಗಳು ಉಪಾಸನೆ ಮಾಡಿ ತಿಳಿಯಬೇಕಾದ ಗಾಂಭೀರ್ಯದೊಂದಿಗೆ ಕೂಡಿವೆ.ಅಂತಹ ಮಹಾಗುಣಗಳಿಂದ ಕೂಡಿರುವದರಿಂದಲೇ ಆ ದೇವತೆಗಳು ಮಿಂದು ಮೈಮರೆಯುತ್ತಾರೆ.ಇಂತಹ ಪ್ರಸಂಗದಲ್ಲಿ ಸಾಮಾನ್ಯಜಂತುಗಳಾದ ಮಂದಭಾಗ್ಯರಾದ ನಮ್ಮಂತಹ ಮನುಜರಿಗೆ ಈ ಗ್ರಂಥ ಕೈಗೆಟಕುವುದೆಂತು? ಆದರೂ ಈ

ಸಂಶೋಧನಾತ್ಮಕಕೃತಿಯು ಗುರ್ವನುಗ್ರಹ ಹಾಗೂ ಗುರ್ವಾಜ್ಞಾಪೂರ್ವಕವಾಗಿರುವದರಿಂದ ಅನೇಕಗುಣಗಳಿಂದ ಕೂಡಿದೆ.ಅದರಂತೆ ಮನುಷ್ಯಸಹಜವಾದ ಪ್ರಮಾದದಿಂದಾಗಿ ಅನೇಕದೋಷಗಳು ಇರುವುದು ಪ್ರತ್ಯಕ್ಷಸಿದ್ಧ. ಸಜ್ಜನರು ಹಂಸಕ್ಷೀರನ್ಯಾಯದಂತೆ ದೋಷಗಳನ್ನು ಬಿಟ್ಟು ಗುಣಗಳನ್ನು ಮಾತ್ರ ಸ್ವೀಕರಿಸಿ ಅನುಗ್ರಹಿಸಬೇಕು. ನಮ್ಮಿಂದಾದ ತಪ್ಪುಗಳನ್ನು ತಿದ್ದಿ ಈ ಸಂಶೋಧನೆಯ ಕಾರ್ಯಕ್ಕೆ ಪ್ರೋತ್ಸಾಹಿಸಬೇಕು.

**ನಮ ಉಕ್ತಿಂ ವಿಧೇಮ**

ಶ್ರೀ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರು ಇಪ್ಪತ್ತನೇ ಶತಮಾನ ಕಂಡ ದಿವ್ಯ ತಪಸ್ವಿಗಳು ಮತ್ತು ಮಹಾಜ್ಞಾನಿಗಳು. ರಾಮದೇವರ ಪೂಜೆ ಹಾಗು ಶ್ರೀಮನ್ನ್ಯಾಯಸುಧಾದಿಗ್ರಂಥಗಳ ಪಾಠ ಪ್ರವಚನಗಳೇ ಅವರ ಜೀವನದ ಉಸಿರಾಗಿತ್ತು. ಇಡಿಯಾದ ಮಾಧ್ವಸಮಾಜವನ್ನೇ ತಮ್ಮ ಕರುಣೆಯ ಕಡಲಲ್ಲಿ ಮುಳುಗಿಸಿ ಪೋಷಿಸಿದರು. ಈ ಮಹಾನುಭಾವದ ಪ್ರಯತ್ನ ಹಾಗು ಪರಮಾನುಗ್ರಹಗಳೇ ಈ ಗ್ರಂಥವು ಪ್ರಕಾಶನವಾಗುವದಕ್ಕೆ ಕಾರಣ. ಪ್ರತಿನಿತ್ಯ ರಾಮದೇವರ ಪೂಜೆ, ಪಾಠ- ಪ್ರವಚನಗಳು, ಲಕ್ಷಾವಧಿಭಕ್ತರ ಅನುಗ್ರಹ ಈ ಎಲ್ಲ ಕಾರ್ಯಕ್ರಮಗಳ ನಡುವೆಯೂ, ಹಸಿವು ಬಾಯಾರಿಕೆ ಲೆಕ್ಕಿಸದೆ ಹಗಲು ರಾತ್ರಿ ಎನ್ನದೆ ಊರೂರು ತಿರುಗಿ ಹತ್ತಾರು ವರ್ಷ ಕಷ್ಟಪಟ್ಟು ಅನೇಕ ಅಪೂರ್ವ ಅಮೂಲ್ಯ ಟೀಕಾ ಟಿಪ್ಪಣಿಗಳನ್ನು ಸಂಗ್ರಹ ಮಾಡಿಟ್ಟಿದ್ದಾರೆ. ಇದು ಅವರು ಮಾಧ್ವ ಸಮಾಜಕ್ಕೆ ಮಾಡಿದ ಪರಮಾನುಗ್ರಹ. ಇದಕ್ಕಾಗಿ ಅವರಿಗೆ ಭಕ್ತಿಶ್ರದ್ಧಾಪೂರ್ವಕವಾದ ಅನಂತ ಜನ್ಮದ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳು. ಅವರ ಸಂಗ್ರಹಸಿಂಧುವಿನ ಒಂದು ಬಿಂದುವೇ ಈ ಗ್ರಂಥ.

ಶ್ರೀ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಐವತ್ತು ವರ್ಷದ ತಪಸ್ಸಿನ ಫಲವೇ ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರು. ಈ ಫಲವನ್ನು ಕರುಣಿಸಿದ ಆ ಮಹಾನುಭಾವರಿಗೆ ಮತ್ತೊಮ್ಮೆ ಕೋಟಿ ಕೋಟಿ ಪ್ರಣಾಮಗಳು. ಶ್ರೀಸತ್ಯಾತ್ಮತೀರ್ಥರದು ಹದಿನೆಂಟರ ಹರೆಯಲ್ಲೂ ಎಂಬತ್ತರ ಪಕ್ವತೆ. ಇವರು ಎಷ್ಟು ಸಂಪ್ರದಾಯನಿಷ್ಠರೋ ಅಷ್ಟೇ ಆಧುನಿಕರು. ಒಂದರ್ಥದಲ್ಲಿ ಹಳೇ ಬೇರು ಹೊಸ ಚಿಗುರು. ಸಮಗ್ರ ಸಮಾಜವನ್ನು ತಮ್ಮ ಸುಂದರ ಮಂದಹಾಸದಿಂದ ಸಂತೈಸುವ ಭಗವಂತನ ಚಲಪ್ರತಿಮರು. ಅವರು ಈಗಿನ ಸಮಾಜಕ್ಕೆ ದಾರಿದೀಪ. ಪಾಠ ಪ್ರವಚನ ಮಾಡುವ ಪಂಡಿತರಿಗೆ ಆಶ್ರಯ ಭೂಮಿ. ವಿದ್ಯಾರ್ಥಿಗಳನ್ನು ಸಿದ್ಧಪಡಿಸುವದು ಅವರ ವ್ರತ. ಸಿದ್ಧಾಂತ ಪ್ರಚಾರ ಅವರ ಉಸಿರು. ಅದರ ಸಂರಕ್ಷಣೆಗೆ ತಮ್ಮನ್ನೇ ಅರ್ಪಿಸಿಕೊಂಡಿದ್ದಾರೆ. ಸಂಶೋಧನೆಯ ಕಾರ್ಯಕ್ಕಾಗಿಯೇ ಅವರ ಸರ್ವಸ್ವ. ಈಗಾಗಲೇ ಸಮಾಜಕ್ಕಾಗಿ ವಿದ್ಯಾರ್ಥಿಗಳಿಗಾಗಿ ನೂರಾರು ಗ್ರಂಥಗಳನ್ನು ಪ್ರಕಾಶಿಸಿ ಪರಮಾನುಗ್ರಹ ಮಾಡಿದ್ದಾರೆ. ವೈಯಕ್ತಿವಾಗಿ ನಮಗೆ ಅನೇಕಗ್ರಂಥಗಳ ಪಾಠವನ್ನು ಹೇಳಿ ನಮ್ಮಲ್ಲಿ ಸಂಶೋಧನಪ್ರಜ್ಞೆಯನ್ನು ಮೂಡಿಸಿದ ಮಹಾಗುರುಗಳು ಇವರು. ಈ ಗುರುಗಳು ಪರಮಾನುಗ್ರಹ ಮಾಡಿ ನಮಗೆ ಈ ಗ್ರಂಥದ ಸಂಶೋಧನೆಗೆ ಆಜ್ಞಾಪಿಸಿದರು. ಹಸ್ತಪ್ರತಿಗಳನ್ನು ಕರುಣಿಸಿ, ಸಂಶೋಧನೆಯ ಕಾರ್ಯದಲ್ಲಿ ನಮಗೆ ಬಂದ ಸಂಶಯಗಳನ್ನು ಪರಿಹರಿಸಿ ಮಾರ್ಗದರ್ಶನ ಮಾಡಿದ ಶ್ರೀ ಶ್ರೀಗಳವರಿಗೆ ನಮ್ಮ ಭಕ್ತಿಪೂರ್ವಕವಾದ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳು.

ಪಂಡಿತ ಸಮಾಜವೇ ಬೆರಳು ಕಚ್ಚುವ ಪಾಂಡಿತ್ಯವಿದ್ದರೂ, ಅತ್ಯಂತ ಎತ್ತರದ ವ್ಯಕ್ತಿಯಾದರೂ ಅತ್ಯಂತ ಸರಳಹೃದಯಿಗಳಾದ ಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಪರಮ ಪೂಜ್ಯ ಆಚಾರ್ಯರವರು (ಗುತ್ತಲಾಚಾರ್ಯರು) ತಮ್ಮ ನಿರಂತರವಾದ ಶ್ರೀಮನ್ನ್ಯಾಯಸುಧಾದಿ ಉದ್ಗ್ರಂಥಗಳ ಅಧ್ಯಾಪನದ ನಡುವೆಯೂ ಅಡಿಟಿಪ್ಪಣಿಗಳಲ್ಲಿ ಸಂಗ್ರಹಿಸಿದ ಪ್ರಮಾಣಗಳ ಯುಕ್ತಾಯುಕ್ತತೆಯನ್ನು ಪರಿಶೀಲಿಸಿ ಈ ಕಾರ್ಯಕ್ಕೆ ನಮ್ಮನ್ನು ಅನುಗ್ರಹಿಸಿ ಪ್ರೋತ್ಸಾಹಿಸಿದ್ದಾರೆ. ಅವರಿಗೆ ನಮ್ಮ ಭಕ್ತಿಪೂರ್ವಕವಾದ ಅನಂತ ಸಾಷ್ಟಾಂಗ ನಮಸ್ಕಾರಗಳು.

ಶ್ರೀಗಳವರು ಸಂಶೋಧನ ಕೆಲಸಕ್ಕೆ ಆಜ್ಞಾಪಿಸಿದರು. ಆದರೆ ಇದು ನಮಗೆ ತಿಳಿಯದ ವಿಷಯ. ಈ ಕೆಲಸಕ್ಕೆ ನಮ್ಮನ್ನು ಪ್ರೋತ್ಸಾಹಿಸಿದವರೂ, ತಮ್ಮ ದಿನ ನಿತ್ಯದ ಪಾಠ ಪ್ರವಚನ ವಿದ್ಯಾರ್ಥಿಗಳ ಚಿಂತನೆಗಳ ನಡುವೆಯೂ ಹೆಜ್ಜೆ ಹೆಜ್ಜೆಗೆ ದಾರಿ ತೋರಿ ಅನುಗ್ರಹಿಸಿದವರು ನಮ್ಮಂತಹ ನೂರಾರು ವಿದ್ಯಾರ್ಥಿಗಳಿಗೆ ಪ್ರತಿನಿತ್ಯದಲ್ಲೂ ಅನ್ನ ವಸನಗಳಿತ್ತು ಪಾಠ ಹೇಳಿ ಸನ್ಮಾರ್ಗ ತೋರಿ, ಭಗವಂತನ ದರ್ಶನದ ಸಾಧನ ಮಾರ್ಗದಲ್ಲಿ ನಡೆಸುತ್ತಿರುವವರು ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಮಾಹುಲಿ ಆಚಾರ್ಯರು (ಪಂ. ಪೂ. ಮಾಹುಲಿ ವಿದ್ಯಾಸಿಂಹಾಚಾರ್ಯರು). ಪ್ರತಿಕ್ಷಣವೂ ವಿದ್ಯಾರ್ಥಿಗಳ ಸರ್ವತೋಮುಖವಾದ ಅಭಿವೃದ್ಧಿಗೆ ಹಂಬಲಿಸುವ ಮಹಾಚೇತನ. ಪ್ರತಿಯೊಬ್ಬ ವಿದ್ಯಾರ್ಥಿಯು ಮಹಾಪಂಡಿತನಾಗಬೇಕು ಎಂದು ಎಷ್ಟು ಕಳಕಳಿಯೋ ಅಷ್ಟೇ ಕಳಕಳಿ ಅವನು ಪ್ರಾಮಾಣಿಕ ವಿಷ್ಣುಭಕ್ತನಾಗಬೇಕು. ಉತ್ತಮ ಸಾಧಕನಾಗಬೇಕು ಎನ್ನುವುದು. ಇದೇ ಇವರ ಮಹೋದ್ದೇಶ. ಇದಕ್ಕಾಗಿಯೇ ಇವರ ಬದುಕು. ಇವರ ಉಸಿರು. ಈ ಕೆಲಸಕ್ಕೆ ಬೇಕಾದ ಸಕಲ ಸಾಮಗ್ರಿ ಅವರದು. ನಮ್ಮ ಜ್ಞಾನ, ಬುದ್ಧಿ, ವಿಚಾರ, ಗ್ರಂಥಶುದ್ಧಿ, ವಿಮರ್ಶಾಶಕ್ತಿ ಅತ್ಯಲ್ಪವಾದರೂ ಎಲ್ಲವೂ ಆ ಮಹಾಗುರುಗಳದೇ. ಆ ಗುರುಗಳ ಅನುಗ್ರಹದಿಂದ ಅನೇಕ ಪುರಾಣ ಹಾಗು ಪಂಚರಾತ್ರಗಳನ್ನು ಯಥಾಮತಿಯಾಗಿ ಅವಲೋಕಿಸಿ ಶ್ರೀಮದಾಚಾರ್ಯರು ಹೇಳಿದ ಅನೇಕ ಪುರಾಣ ಪ್ರಮೇಯಗಳಿಗೆ ಸಂವಾದಿಯಾದ ಪ್ರಮಾಣಗಳನ್ನು ಅಡಿಟಿಪ್ಪಣಿಯಲ್ಲಿ ಕೊಡಲು ಪ್ರಯತ್ನಿಸಿದ್ದೇವೆ. ಅದನ್ನು ಹುಡುಕುವ ಬಗೆ, ಹೊಂದಿಸುವ ಕ್ರಮ, ಸಂಶಯ ಬಂದಲ್ಲಿ ಪರಿಹಾರ, ಎಲ್ಲವೂ ಅವರ ಮಾರ್ಗದರ್ಶನದಲ್ಲಿ ಆದ ಕಾರ್ಯಗಳೇ. ತಮ್ಮ ನಿರಂತರ ಪಾಠಪ್ರವಚನಗಳ ಮಧ್ಯದಲ್ಲಿಯೂ ನಮಗಾಗಿ ತಮ್ಮ ಅಮೂಲ್ಯಸಮಯವನ್ನು ನೀಡಿ ಅಡಿಟಿಪ್ಪಣಿಗಳನ್ನು ಆಮೂಲಾಗ್ರವಾಗಿ ಪರಿಶೀಲಿಸಿ ತಿದ್ದುಪಡಿಗಳನ್ನು ಮಾಡಿ ಅನುಗ್ರಹಿಸಿದ್ದಾರೆ. ಇದಲ್ಲದೆ ಸಂಶೋಧನೆಯಕಾರ್ಯದಲ್ಲಿ ವಿಘ್ನಗಳು ಬಂದಾಗ ೩-೪ ವರ್ಷಗಳವರೆಗೆ ನಮ್ಮಿಬ್ಬರನ್ನು ಹಾಗು ನಮ್ಮ ಕುಟುಂಬವನ್ನು ಸಾಕಿಸಲಹುವ ಜವಾಬ್ದಾರಿಯನ್ನು ಹೊತ್ತು ಸಲುಹಿವರು. ಅಂತಹ ಗುರುಗಳ ಪಾದಗಳಲ್ಲಿ ಭಕ್ತಿಶ್ರದ್ಧಾಪೂರ್ವಕವಾದ ಅನಂತ ಸಾಷ್ಟಾಂಗ ನಮಸ್ಕಾರಗಳು.

**ಸರ್ವಜ್ಞರ ಸಹೋದರ**

ಬೃಹದ್ಗ್ರಂಥದ ಸಂಶೋಧನೆಯ ಈ ಕಾರ್ಯದಲ್ಲಿ ಮರೆಯಲಾರದ ವ್ಯಕ್ತಿ ಪಂ.ವಿದ್ಯಾಧೀಶಾಚಾರ್ಯರು. ಶ್ರೀಸತ್ಯಾತ್ಮತೀರ್ಥರ (ಸರ್ವಜ್ಞಾಚಾರ್ಯರ) ಪೂರ್ವಾಶ್ರಮದ ಅನುಜರು ಇವರು. ಅಗ್ರಜರು ಮಹಾಯೋಗಿಗಳಾದರೆ ಅನುಜರು ಅನುಯೋಗಿಗಳು. ಅವರು ತಪಸ್ಸಿನ ತಿರುಳಾದರೆ ಇವರು ಅವರ ನೆರಳು. ಶ್ರೀಸತ್ಯಾತ್ಮತೀರ್ಥರನ್ನು ಪರಿಪರಿಯಿಂದ ಸೇವಿಸುವುದೇ ದೊಡ್ಡ ತಪಸ್ಸೆಂದು ಭಾವಿಸಿದವರು.

ಸ್ವಾಮಿಗಳ ಇಂಗಿತವನ್ನು ಅರಿತು, ಅವರ ಎಲ್ಲ ಸಂಕಲ್ಪಗಳನ್ನು ಕಾರ್ಯರೂಪಕ್ಕೆ ತರಲು ಕಟಿಬದ್ಧರಾಗಿ ನಿಂತವರು. ಶ್ರೀಗಳ, ಶ್ರೀಮಠದ ಸಮಸ್ತಕಾರ್ಯಗಳಲ್ಲಿ ಸಿಂಹಪಾಲಿನ ಸೇವೆ ಇವರದು. ತೀರ ಸಾಮಾನ್ಯ ಕೆಲಸಕ್ಕಾಗಿಯೂ ಬಿಮ್ಮುಗಮ್ಮುಗಳಿಲ್ಲದೆ ತಮ್ಮನ್ನು ತೊಡಗಿಸಿಕೊಳ್ಳುವ ಸ್ವಭಾವ ಇವರದು.ಉನ್ನತ ಅಧಿಕಾರವಿದ್ದರೂ ಯಾವ ಪ್ರಸಂಗದಲ್ಲಿಯೂ ತೋರಗೊಡದ ಸಜ್ಜನಿಕೆ. ಉತ್ತಮ ಪ್ರತಿಭೆ, ಅದ್ಭುತವಾದ ಮಾತಿನ ಮೋಡಿ, ಸುಸ್ಪಷ್ಟವಾದ ಶೈಲಿಯಲ್ಲಿ ಮಧ್ವಶಾಸ್ತ್ರದ ಸೊಬಗನ್ನು ಜನಸಾಮಾನ್ಯರಿಗೆ ಮುಟ್ಟಿಸುವ ಕೌಶಲ ಮೊದಲಾದ ಗುಣಗಳು ತುಂಬಿತುಳುಕುತ್ತಿವೆ. ಏವಂಗುಣವಿಶಿಷ್ಟರಾದ ಇವರು ನಮಗೆ ಸಹಪಾಠಿಗಳಾಗಿ, ಸರಳಹೃದಯದ ಸ್ನೇಹಿತರಾಗಿ ಲಭಿಸಿದ್ದು ಜನ್ಮಾಂತರದ ಪುಣ್ಯಪುಂಜದಿಂದಲೇ ಎಂದು ಭಾವಿಸುತ್ತೇವೆ.

ಪಂ.ವಿದ್ಯಾಧೀಶಾಚಾರ್ಯರು ವಿಶ್ವಮಧ್ವಮಹಾಪರಿಷತ್ತಿನ ಪ್ರಧಾನಸಂಚಾಲಕರಾಗಿ ಪರಿಷತ್ತಿನಿಂದ ನಡೆಯುವ ಗ್ರಂಥಸಂಶೋಧನ, ಗ್ರಂಥಪ್ರಕಾಶನ, ಬಡವರಿಗೆ ವೈದ್ಯಕೀಯ ಸವಲತ್ತು , ಲೌಕಿಕಶಿಕ್ಷಣಕ್ಕಾಗಿ ವಿದ್ಯಾರ್ಥಿವೇತನ ಮುಂತಾದ ನೂರಾರು ಕಾರ್ಯಗಳನ್ನು ಅತ್ಯಂತನಿಸ್ಪೃಹವಾಗಿ, ಸಮರ್ಥರೀತಿಯಲ್ಲಿ ನಡೆಸುತ್ತಲಿದ್ದಾರೆ. ಪ್ರಕೃತ, ಅನೇಕವ್ಯಾಖ್ಯಾನಗಳಿಂದ ಕೂಡಿದ ತಾತ್ಪರ್ಯನಿರ್ಣಯದ ಈ ಸಮಗ್ರ ಸಂಶೋಧನಾಕಾರ್ಯದಲ್ಲಿ ಸರ್ವತೋಮುಖವಾಗಿ ಸಹಾಯಮಾಡಿದ, ಎಲ್ಲ ರೀತಿಯಿಂದ ಬೆಂಬಲ ನೀಡಿದ ವಿದ್ಯಾಧೀಶಾಚಾರ್ಯರಿಗೆ ಕೃತಜ್ಞತಾಭಾವಭರಿತವಾದ ಪ್ರಣಾಮಸ್ತೋಮಗಳನ್ನು ಸಮರ್ಪಿಸುತ್ತೇವೆ.

ಅತ್ಯಮೂಲ್ಯವಾದ ಮೋಕ್ಷಸಾಧನವಾದ ಈ ಮಾಧ್ವದೇಹವನ್ನಿತ್ತು ಮಹೋಪಕಾರ ಮಾಡಿದ ದೈಹಿಕ ಮಾನಸಿಕವಾದ ಎಲ್ಲ ಕಷ್ಟಗಳನ್ನು ಸಹಿಸಿ ಈ ಗ್ರಂಥವು ಯಶಸ್ವಿಯಾಗಿ ಪ್ರಕಾಶವಾಗುವದಕ್ಕೆ ಕಾರಣರಾದ ನಮ್ಮ ಮಾತಾಪಿತೃಗಳಿಗೆ ಸಾಷ್ಟಾಂಗ ನಮಸ್ಕಾರಗಳು.

ಚೆಟ್ಟಿ, ಕಂಟಕೋದ್ಧಾರ, ಅತಿವಿಶದವಾಕ್ಯಾರ್ಥವಿವೃತಿ, ಪ್ರಮಾಣಸಂಗ್ರಹ, ಭಾವಚಂದ್ರಿಕಾ, ಭಾವವಿವೃತಿ ಎಂಬ ಆರು ಟಿಪ್ಪಣಿಗಳ ಹಸ್ತಪ್ರತಿಗಳನ್ನು ಇತ್ತು ಉಪಕರಿಸಿದ ಪಂ. ವ್ಯಾಸನಕೆರೆ ಪ್ರಭಂಜನಾಚಾರ್ಯರಿಗೆ, ನವವ್ಯಾಖ್ಯಾನದ ಹಸ್ತಪ್ರತಿಗಳನ್ನು ಕೊಟ್ಟ ಪಂ. ಮಳಗಿ ಜಯತೀರ್ಥಾಚಾರ್ಯರಿಗೆ, ವೇದಾಂಗತೀರ್ಥ ಟಿಪ್ಪಣಿಯ ಸಂಶೋಧಿತ ಪ್ರತಿಯನ್ನು ನೀಡಿದ ಪಂ. ಬನ್ನಂಜೆ ಗೋವಿಂದಾಚಾರ್ಯರಿಗೆ, ತಮ್ಮ ಸಂಗ್ರಹದ ಹಸ್ತಪ್ರತಿಗಳನ್ನು ನೀಡಿ ನಮಗೆ ಉಪಕಾರಮಾಡಿದ ಪ್ರಸ್ತುತ ಪೂರ್ಣಪ್ರಜ್ಞ ಸಂಶೋಧನ ಮಂದಿರದ ನಿರ್ದೇಶಕರಾದ ಪಂ. ನಾಗಸಂಪಿಗೆ ಆನಂದತೀರ್ಥಾಚಾರ್ಯರಿಗೆ, ಚೆಟ್ಟಿ ಕೋನೇರಿ ಟಿಪ್ಪಣಿಯ ತೆಲುಗು ಲಿಪಿಪ್ರತಿಯನ್ನು ಕೊಟ್ಟು ಉಪಕರಿಸಿದ ಪಂ. ರಾಮಮೂರ್ತ್ಯಾಚಾರ್ಯರಿಗೆ, ಜನಾರ್ದನಭಟ್ಟರ ಟಿಪ್ಪಣಿಯ ಹಸ್ತಪ್ರತಿಯನ್ನು ಕೊಟ್ಟ ಪಂ.ಪ್ರದೀಪಸಿಂಹಾಚಾರ್ಯರಿಗೆ, ಇವರೆಲ್ಲರಿಗೂ ನಮಸ್ಕಾರಗಳು.

ಇಳಿ ವಯಸ್ಸಿನಲ್ಲಿಯೂ ನವಯುವಕರಂತೆ ಕ್ರಿಯಾಶೀಲರಾದ ಪಂಡಿತರಾದ ಪ್ರೋ.ಕೆ.ಟಿ. ಪಾಂಡುರಂಗಿಯವರು ತಮ್ಮ ಬಿಡುವಿಲ್ಲದ ಕಾರ್ಯಕ್ರಮಗಳಲ್ಲಿ ನಿರತರಾಗಿದ್ದರೂ ಈ ಗ್ರಂಥವನ್ನು ನೋಡಿ ಉತ್ತಮವಾದ ಆಂಗ್ಲಭಾಷೆಯ ಮುನ್ನುಡಿಯನ್ನು ನೀಡಿದ್ದಾರೆ. ಅವರಿಗೆ ಅನೇಕ ನಮನಗಳು.

ವೇದಾಂಗತೀರ್ಥಟಿಪ್ಪಣಿಯ ಮತ್ತು ಭಾರತಶ್ರೀನಿವಾಸಾಚಾರ್ಯರ ಟಿಪ್ಪಣಿಯ ಛಾಯಾಪ್ರತಿಯನ್ನು ಇತ್ತು ಉಪಕಾರ ಮಾಡಿದ ಮೈಸೂರು ಪ್ರಾಚ್ಯ ಸಂಶೋಧನಾಲಯದ ನಿರ್ದೇಶಕರಿಗೆ ಹಾಗೂ ಅನಂತಭಟ್ಟರ ಮತ್ತು ಜಂಬುಖಂಡಿಟಿಪ್ಪಣಿಯನ್ನು ಕೊಟ್ಟ ಚೆನ್ನೈ ಪ್ರಾಚ್ಯ ಸಂಶೋಧನಾಲಯದ ನಿರ್ದೇಶಕರಿಗೆ ನಾವು ಆಭಾರಿಯಾಗಿದ್ದೇವೆ. ಉಮಾಸಂಹಿತಾ ಮೊದಲಾದ ಪ್ರಾಚೀನ ಹಸ್ತಪ್ರತಿಗಳ ನಕಲುಗಳನ್ನು ನೀಡಿದ ತಂಜಾವೂರಿನ ಸರಸ್ವತೀಮಹಲ್ ಗ್ರಂಥಾಲಯದವರಿಗೆ ಹಾಗೂ ಈ ಪ್ರತಿಗಳನ್ನು ಒದಗಿಸಿಕೊಡಲು ವಿಶೇಷ ಸಹಾಯಮಾಡಿದ ಶ್ರೀ.ಬಿಂದುಮಾಧವನ್ (ಐ.ಎ.ಎಸ್) ಚೆನ್ನೈ ಇವರಿಗೆ ಅನೇಕ ಧನ್ಯವಾದಗಳು.

ಈ ಕೆಲಸಕ್ಕೆ ಆಶೀರ್ವಾದ ಮಾಡಿ ಸಹಾಯ ಮಾಡಿದ ಹಿರಿಯರು ಅನೇಕರು. ಈ ಕಾರ್ಯಕ್ಕೆ ಅಡಿಪಾಯ ಹಾಕಿ ಪ್ರಾರಂಭಿಸಿದ ಬಹುಭಾಗವನ್ನು ಸಂಶೋಧಿಸಿ ಮಾರ್ಗದರ್ಶನ ಮಾಡಿದ ಪಂ. ರಾಮಕೃಷ್ಣಾಚಾರ್ಯ ರೊಟ್ಟಿ, ಪಂ. ರಾಘವೇಂದ್ರಾಚಾರ್ಯ ಜಯಮಂಗಲಂ ಅವರಿಗೆ ಹಾಗು ಅನೇಕ ರೀತಿಯಿಂದ ಸಹಕಾರ ಮಾಡಿರುವ ಪಂ. ಶ್ರೀಧರಾಚಾರ್ಯ ಜೋಶಿ ಇವರಿಗೆ ನಮ್ಮ ಪ್ರಣತಿತತಿಗಳು.

ಈ ಹೆಬ್ಬೊತ್ತಿಗೆಯ ಸಂಶೋಧನೆಯ ಮಹಾಕಾರ್ಯದಲ್ಲಿ ಸಹಾಯಹಸ್ತ ಚಾಚಿದ ವಿದ್ವಾಂಸರು ಅನೇಕರು. ಅವರಲ್ಲಿ ಒಬ್ಬರು ಪಂ.ವೇದವ್ಯಾಸಾಚಾರ್ಯ ಇಟಗಿಯವರು. ಇವರು ಬ್ರಾಹ್ಮೀ, ಗ್ರಂಥಿ ಮೊದಲಾದ ಹತ್ತಾರು ಪ್ರಾಚೀನ ಲಿಪಿಗಳನ್ನು ಅನಾಯಾಸವಾಗಿ ಓದುವದರಲ್ಲಿ ನಿಷ್ಣಾತರು. ಇದಲ್ಲದೆ ಸಮಗ್ರ ಭಾರತ-ಭಾಗವತಗ್ರಂಥಗಳನ್ನು ತಲೆಯಲ್ಲಿ ತುಂಬಿಕೊಂಡ ತರುಣವಿದ್ವಾಂಸರು. ಇವರು ತಮ್ಮ ಅವರ್ಜನೀಯವಾದ ಕರ್ತವ್ಯಗಳ ಮಧ್ಯದಲ್ಲಿ ತಮ್ಮ ಸಂಶೋಧನದೃಷ್ಟಿಯನ್ನು ಇಲ್ಲಿಯೂ ಹರಿಸಿ ಸಹಾಯ ಮಾಡಿದ್ದಾರೆ. ವಿದ್ವನ್ಮಿತ್ರರಾದ ಇವರಿಗೆ ಅಭಿವಂದನೆಗಳು.

ಹಗಲು-ರಾತ್ರಿಗಳಲ್ಲಿ ಎಚ್ಚರವಿದ್ದು, ಪರಿಷತ್ತಿನ ಅನೇಕ ಚಟುವಟಿಕೆಗಳ ಮಧ್ಯದಲ್ಲಿ ಸೂಲಗಿತ್ತಿಯಂತೆ ಸಕಾಲದಲ್ಲಿ ಈ ಮಹದ್ಗ್ರಂಥವು ಪ್ರಸವ ಆಗುವಹಾಗೆ ಮಾಡಿದ, ಸಹೃದಯಿಗಳಾದ, ವಿದ್ವಾಂಸರಾದ ಪಂ.ಮಹಿದಾಸಾಚಾರ್ಯ ಜೋಷಿಯವರಿಗೆ ಕೃತಜ್ಞತಾಪೂರ್ವಕವಾದ ಅಭಿವಂದನೆಗಳು. ಇಷ್ಟೇ ಅಲ್ಲದೇ ಈ ಕಾರ್ಯಕ್ಕೆ ಅನೇಕ ರೀತಿಯಿಂದ ಸಹಕಾರಮಾಡಿದ ಸತ್ಯಧ್ಯಾನವಿದ್ಯಾಪೀಠದ ಅಣ್ಣ-ತಮ್ಮಂದಿರಿಗೆ ಕೃತಜ್ಞತೆಗಳು.



# ಸಮರ್ಪಣೆ

**ಗುರೋರನುಗ್ರಹಮೃತೇ ಸಾಧನಂ ನ ಹರೇಃ ಪ್ರಿಯಮ್**

ನಾವು ಮಾಡಿದ ಈ ಅಳಿಲು ಸೇವೆ ಭಗವಂತನಿಗೆ ಪ್ರಿಯವಾಗಿ ಭಗವಂತ ಸಂತುಷ್ಟನಾಗಿ ಅನುಗ್ರಹಿಸಬೇಕಾದರೆ ಗುರ್ವನುಗ್ರಹವೇ ಮುಖ್ಯಕಾರಣ. ಕಾರಣ ಈ ಸೇವೆಯನ್ನು ಗುರುಗಳು ಹಾಗು ತದಂತರ್ಯಾಮಿ, ಪರಮಗುರುಗಳು ತದಂತರ್ಯಾಮಿ, ಶ್ರೀಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥಶ್ರೀಪಾದಾದಿ ಸಮಸ್ತ ಗುರುಗಳು ಅವರ ಅಂತರ್ಯಾಮಿಗಳಾದ, ಈ ಗ್ರಂಥದ ಸಕಲ ವ್ಯಾಖ್ಯಾತೃಗಳ ಅಂತರ್ಯಾಮಿಗಳಾದ, ತತ್ತ್ವಾಭಿಮಾನಿದೇವತೆಗಳು ಹಾಗು ವರ್ಣಾಭಿಮಾನಿ ದೇವತೆಗಳು ಅವರ ಅಂತರ್ಯಾಮಿಗಳಾದ ಶ್ರೀಮದಾಚಾರ್ಯರು ತದಂತರ್ಯಾಮಿ ಯಾದ ಪೂರ್ವೋತ್ತರವರ್ಣಸಂಧಿ ಸಂಹಿತಾಗಳಿಂದ ಪ್ರತಿಪಾದ್ಯನಾದ ವರಾಹ ವಾಮನ ನರಸಿಂಹ ರೂಪಗಳಿಂದ ಅಭಿನ್ನರಾದ ಶ್ರೀರಾಮಕೃಷ್ಣವೇದವ್ಯಾಸದೇವರ ಪಾದಪದ್ಮಗಳಲ್ಲಿ ಭಕ್ತಿಶ್ರದ್ಧಾಪೂರ್ವಕ ಸಮರ್ಪಿಸುವೆವು

ಪ್ರೀತೋಽಸಿ ಮಾಪತೇ ವ್ಯಾಸ ಯದಿ ಕೇನಾಽಪಿ ಕರ್ಮಣಾ ।
ಕುರು ಮಾಂ ಮಧ್ವಶಾಸ್ತ್ರಸ್ಯ ಸದಾವೃತ್ತಿರತಂ ಪ್ರಭೋ ॥
ಅನೇನ ಭಾವಿ ಯತ್ ಪುಣ್ಯಂ ಅವಾಪ್ನೋತು ಗುರುರ್ಮಮ ॥

# ಟಿಪ್ಪಣೀಕಾರರ ಪರಿಚಯ

**೧. ಶ್ರೀವ್ಯಾಸತೀರ್ಥರು – ಭಾರತಭಾವಪಂಚಿಕಾ**

ಜಗತ್ತು ಎಂದಿಗೂ ಕಾಣದ ಅಚ್ಚರಿಯ ಆಕರ ಶ್ರೀಜಯತೀರ್ಥರು. ಅಧ್ಯಾತ್ಮ ಜೀವನ ಬಹು ಅಲ್ಪ. ಕಾಯಕ ಸಮುದ್ರದಷ್ಟು. ಇಂದಿಗೂ ಪ್ರತಿವಾದಿಗಳಲ್ಲಿ ಇವರಿಗೆ ಎದುರಿಲ್ಲ. ಸಿದ್ಧಾಂತದಲ್ಲಿ ಸಮರಿಲ್ಲ. ವೇದವ್ಯಾಸರೆಂಬ ಸಮುದ್ರದಿಂದ ಹೊರಹೊಮ್ಮಿದ, ಮಾರುತನ ಮಾತಿನಿಂದ ಪಸರಿಸಿದ, ತತ್ವಸುಧೆಯನ್ನು ನ್ಯಾಯಸುಧೆಯ ರೂಪದಿಂದ ಭೂಸುರರಿಗೆ ಉಣಿಸಿದ ವಾಸವ ಈ ಮುನಿ. ಇವರ ಮುಖದಿಂದಲೇ ತತ್ವಜ್ಞಾನದ ಸುಧೆಯನ್ನು ಪಾನಮಾಡಿದವರು ಶ್ರೀವ್ಯಾಸತೀರ್ಥರು. ಈಶ-ಷಟ್ಪ್ರಶ್ನ ಉಪನಿಷತ್‌ಗಳಿಗೆ ಟೀಕೆಯನ್ನು ಬರೆದ ಟೀಕಾಕೃತ್ಪಾದರು, ಉಳಿದ ಉಪನಿಷತ್‌ಗಳಿಗೆ ಬರೆಯುವ ಭಾಗ್ಯ ತಮ್ಮದಾಗಬೇಕೆಂದು ವ್ಯಾಸತೀರ್ಥರು ಬೇಡಿದರೆ, ಇಲ್ಲ ಎನ್ನಲಿಲ್ಲ. ಕಾರಣ ಉಳಿದ ಉಪನಿಷತ್‌ಗಳ ಜ್ಞಾನ ಇವರ ಟೀಕೆಯಿಂದಲೇ ಆಗಬೇಕು. ಇತ್ತೀಚಿಗೆ ಇವರು ಬರೆದ ಈಶಾವಾಸ್ಯಭಾಷ್ಯಟೀಕಾವನ್ನು ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರು ಪ್ರಕಟಿಸಿದ್ದಾರೆ. ಇವರ ಕಾಲ ೧೪ ನೇ ಶತಮಾನ. ಪೀಠವನ್ನು ಬಯಸದೇ ಬಿಡಿ ಸನ್ಯಾಸಿಗಳಾಗಿಯೇ ಸಾಧನವನ್ನು ಮಾಡಿದವರಿವರು. ಮಳಖೇಡದಲ್ಲಿ ಟೀಕಾಕೃತ್ಪಾದರ ಎದುರಿಗೆ ಇವರ ವೃಂದಾವನ ಈಗಲೂ ವಿರಾಜಮಾನವಾಗಿದೆ. ಇವರ ಈ ಕೃತಿ ಮಹಾಭಾರತತಾತ್ಪರ್ಯನಿರ್ಣಯಕ್ಕೆ ಚೊಚ್ಚಲು ಟಿಪ್ಪಣೀ. ಇದರ ನಾಮಧೇಯ 'ಭಾರತಭಾವಪಂಚಿಕಾ'. ಸಂಕ್ಷಿಪ್ತವಾಗಿ, ಬಹು ಅರ್ಥಗಂಭೀರವಾದದ್ದು ಇವರ ಟಿಪ್ಪಣಿ. ಅವಶ್ಯವಾದಲ್ಲಿ ಮೂಲದ ಅರ್ಥವನ್ನು ಬರೆಯುವುದನ್ನು ಬಿಟ್ಟಿಲ್ಲ. ಪ್ರಾಯಃ ಮುಂದಿನ ಟಿಪ್ಪಣೀಕಾರರು ಇವರನ್ನು ಅನುಸರಿಸುತ್ತಾರೆ. ಅನೇಕ ಸ್ಥಳಗಳಲ್ಲಿ ಇವರ ವಾಕ್ಯವನ್ನು ಸೇರಿಸಿ ವ್ಯಾಖ್ಯಾನಮಾಡಿದ್ದಾರೆ.

ಇಷ್ಟೇ ಅಲ್ಲದೇ ಇವರು ಅಣುಜಯತೀರ್ಥವಿಜಯ, ಬೃಹತ್‌ಜಯತೀರ್ಥವಿಜಯಗಳನ್ನು ರಚಿಸಿ ಟೀಕಾಕೃತ್ಪಾದರ ಮಹಿಮೆಯನ್ನು ಸಾರಿದ್ದಾರೆ. ತಂತ್ರಸಾರಕ್ಕೆ ವ್ಯಾಖ್ಯಾನರಚಿಸಿರುವದಾಗಿ ಪ್ರತೀತಿ ಇದೆ. ಪ್ರಮಾಣಮಾಲಿಕಾ ಎಂಬ ಗ್ರಂಥವನ್ನು ರಚಿಸಿರುವದಾಗಿ ಉಲ್ಲೇಖ ಉಂಟು.

**೨. ಶ್ರೀವೇದಾಂಗತೀರ್ಥರು – ತಾತ್ಪರ್ಯದೀಪಿಕಾ**

ಮಾಧವನ ಮಮತೆಯ ಮಗು ಆಚಾರ್ಯ ಮಧ್ವರು. ಅವರ ಅನುಜನಾಗಿ ಹುಟ್ಟುವ ಭಾಗ್ಯ ಪಡೆದವರು ಶ್ರೀವಿಷ್ಣುತೀರ್ಥರು. ಅನುಗ್ರಹಪೂರ್ವಕವಾಗಿ ಆಚಾರ್ಯರು ಕರುಣಿಸಿದ ಭೂವರಾಹದೇವರ ಆರಾಧಕರು. ಆಚಾರ್ಯರ ಮುಖದಿಂದ ಸಕಲ ವಿದ್ಯೆಯನ್ನು ಪಡೆದು ಯೋಗಿಗಳಿಂದಲೂ ಮಾಡಲಾಗದ ತಪಸ್ಸಿನಿಂದ ಹರಿಯನ್ನು ಪ್ರತ್ಯಕ್ಷ ಕಂಡವರು. ಅವರ ದಿವ್ಯಪರಂಪರೆಯಲ್ಲಿ ಬಂದವರು ಕುಂಭಾಸಿ ಮಠದ ಯತಿಗಳು. (ಸೋದಾ ಮಠ) ಈ ಪರಂಪರೆಯಲ್ಲಿ ೧೩ನೆಯವರು ಶ್ರೀವೇದಾಂಗತೀರ್ಥರು. ಇವರ ವೃಂದಾವನ ಉತ್ತರ ಕನ್ನಡ ಜಿಲ್ಲೆಯಲ್ಲಿ ಸಿದ್ಧಾಪುರ ಪ್ರಾಂತದ ಶಾಲ್ಮಲೀ ನದಿತೀರದ ಬಿಳಗಿ ಎಂಬ ಹಳ್ಳಿಯಲ್ಲಿ ವಿರಾಜಮಾನವಾಗಿದೆ. ಇವರ ವ್ಯಾಖ್ಯಾನ ಶ್ರೀವ್ಯಾಸತೀರ್ಥರ ಟಿಪ್ಪಣಿಗಿಂತಲು ಸ್ವಲ್ಪ ವಿಸ್ತಾರವಾಗಿದೆ. ಇದರ ನಾಮಧೇಯ '**ತಾತ್ಪರ್ಯದೀಪಿಕಾ**'. ೪ನೇ ಅಧ್ಯಾಯದಿಂದ ಮುಂದೆ ಮಾತ್ರ ಉಪಲಬ್ಧವಾಗಿದೆ. ಪ್ರಾಯಃ ಮುಂದಿನ ಅನೇಕ ಟಿಪ್ಪಣಿಕಾರರು ಇವರ ಟಿಪ್ಪಣಿಯನ್ನು ಅನುಸರಿಸುತ್ತಾರೆ. ಶ್ರೀವಿದ್ಯಾಧೀಶತೀರ್ಥರ

ಶಿಷ್ಯರಾದ ಮಧುಸೂದನಭಿಕ್ಷುಗಳು ಇವರ ಟಿಪ್ಪಣಿಯನ್ನು ಹಲವೆಡೆ ವಿಮರ್ಶಿಸುತ್ತಾರೆ. ಕೆಲವು ಸ್ಥಳಗಳಲ್ಲಿ ಕಠಿಣವಾದ ಶಬ್ದಗಳಿಗೆ ಮಾತ್ರವ್ಯಾಖ್ಯಾನ ಮಾಡಿ ಮೂಲದ ಅರ್ಥ ಅನಾಯಸವಾಗಿ ಆಗಲು ಉಪಕಾರಕವಾಗಿದೆ ಈ ಟಿಪ್ಪಣಿ. ಇವರ ಮತ್ತೊಂದು ಕೃತಿ ಸುಮಧ್ವವಿಜಯ ಟಿಪ್ಪಣಿ.

**೩. ಶ್ರೀವಾದಿರಾಜತೀರ್ಥರು - ಭಾವಪ್ರಕಾಶಿಕಾ**

ಕವಿತಾ, ಸಾಹಿತ್ಯ, ಸುಂದರ ಸರಸ ಅಲಂಕಾರಗಳು, ನವರಸಗಳು, ಲಲಿತ ಪದಗಳು, ನವ ನವೀನ ಕಲ್ಪನೆಗಳು ಶ್ರೀಹರಿಯ ಮಹಿಮೆಗಳನ್ನು ಹೊಗಳಿದಾಗ ಮಾತ್ರ ಸಾರ್ಥಕವಾಗುತ್ತದೆ ಎಂದು ಭಾಗವತ ಸಾರುತ್ತದೆ. ಈ ಮಾತನ್ನು ನೂರರಷ್ಟು ಪಾಲಿಸಿದವರು ಶ್ರೀವಾದಿರಾಜರು. ಕಾಳಿದಾಸ, ದಂಡಿ, ಮಾಘ ಮೊದಲಾದವರನ್ನು ಮೀರಿಸುವ ಉಪಮಾ, ಪದಲಾಲಿತ್ಯ, ಪದಬಂಧ, ಯಮಕಗಳನ್ನು ಈ ಮಹಾನುಭಾವರ ರುಕ್ಮಿಣೀಶವಿಜಯ ಮುಂತಾದ ಕಾವ್ಯಗಳಲ್ಲಿ ನಾವು ಕಾಣಬಹುದು. ಶಾಸ್ತ್ರದಲ್ಲಿ ನುರಿತವರಿಗೆ ಕಾವ್ಯಶ್ರೀ ಇಲ್ಲ. ಕವಿತೆ ಬಲ್ಲವರಿಗೆ ಶಾಸ್ತ್ರ ಶೂನ್ಯ. ಇದಕ್ಕೆ ಅಪವಾದ ಶ್ರೀವಾದಿರಾಜರು. ಇವರ ಕೃತಿಗಳು ಕೇವಲ ಜನಮನೋರಂಜಕ ರಚನೆಗಳಾಗದೆ ಜಿಜ್ಞಾಸುಗಳಿಗೆ ಸರಳವಾಗಿ ಸಿದ್ಧಾಂತವನ್ನು ತಿಳಿಸುವ ತತ್ವಗ್ರಂಥಗಳೂ ಆಗಿವೆ. ಅತಿ ಕಠಿಣತತ್ವಗಳನ್ನು ಸರಳವಾಗಿ ನಿರೂಪಿಸುವುದು ಶ್ರೀವಾದಿರಾಜರ ವೈಶಿಷ್ಟ್ಯ. ೧೨೦ ವರ್ಷಗಳ ತುಂಬು ಸನ್ಯಾಸ ಜೀವನವನ್ನು ನಡೆಸಿದವರು. ಶ್ರೀಮದಾಚಾರ್ಯರ ಅನುಜರಾದ ಶ್ರೀವಿಷ್ಣುತೀರ್ಥರ ಸೋದಾ ಮಠದಲ್ಲಿ ಬಂದ ೨೦ನೇ ಯತಿಗಳಿವರು. ಅನನ್ಯ ಭಕ್ತಿಯಿಂದ ಹಯಗ್ರೀವದೇವರನ್ನು ಒಲಿಸಿಕೊಂಡವರು. ತಪೋಮೂರ್ತಿಗಳು. ತೋರಿದ ಪವಾಡ ಬೆಟ್ಟದಷ್ಟು. ನಮಗೆ ತಿಳಿದಿರುವುದು ಎಳ್ಳಷ್ಟು. ಸಂಸ್ಕೃತ, ಕನ್ನಡ, ತುಳು ಭಾಷೆಗಳಲ್ಲಿ ನೂರಾರು ಗ್ರಂಥ ಪದ - ಪದ್ಯ ಸುಳಾದಿಗಳನ್ನು ರಚಿಸಿ ಸಾಮಾನ್ಯ ಜನತೆಗೂ ಮಧ್ವಸಿದ್ಧಾಂತವನ್ನು ಮುಟ್ಟಿಸಿದವರು. ತಾಯಿಯ ಹರಕೆಯನ್ನು ತೀರಿಸುವ ನೆಪದಲ್ಲಿ 'ಮಹಾಭಾರತಲಕ್ಷಾಲಂಕಾರ' ಗ್ರಂಥವನ್ನು ಬರೆದವರು ಶ್ರೀವಾದಿರಾಜರು. ಶ್ರೀಮದಾಚಾರ್ಯರ ಅನೇಕ ಗ್ರಂಥಗಳಿಗೆ ವ್ಯಾಖ್ಯಾನಮಾಡಿರುತ್ತಾರೆ. ಅನೇಕ ಸ್ವತಂತ್ರ ಗ್ರಂಥಗಳನ್ನು ರಚಿಸಿರುತ್ತಾರೆ. ಅವರ ಅನೇಕ ಗ್ರಂಥರತ್ನಗಳಲ್ಲಿ 'ಮಹಾಭಾರತತಾತ್ಪರ್ಯನಿರ್ಣಯ ಭಾವಪ್ರಕಾಶಿಕಾ' ಶ್ರೇಷ್ಠಗ್ರಂಥರತ್ನವಾಗಿದೆ. ಅನೇಕ ಅಪೂರ್ವವಿಷಯಗಳನ್ನು ಒಳಗೊಂಡಿರುವುದು ಈ ಟಿಪ್ಪಣಿ.

ಉದಾ :- ವ್ಯತ್ಯಾಸ, ಪ್ರಾತಿಲೋಮ್ಯ ಎಂಬ ಎರಡು ರೀತಿಯಾದ ವ್ಯಾಖ್ಯಾಭೇದಗಳಿಗೆ ಉದಾಹರಣೆಯನ್ನು ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. ಉಳಿದ ಐದು ಪ್ರಭೇದಗಳನ್ನು ಉದಾಹರಣೆ ಸಹಿತವಾಗಿ ವಿವರಣೆ ಮಾಡಿದವರು ಶ್ರೀವಾದಿರಾಜರು. ಹೀಗೆ ಶ್ರೀಮದಾಚಾರ್ಯರ ಭಾವವನ್ನು ಜಿಜ್ಞಾಸುಗಳಿಗೆ ಮನಮುಟ್ಟುವಂತೆ ವ್ಯಾಖ್ಯಾನ ಮಾಡಿ ಪರಮಾನುಗ್ರಹಮಾಡಿದ್ದಾರೆ.

**೪. ಶ್ರೀಸತ್ಯಾಭಿನವತೀರ್ಥರು - ದುರ್ಘಟಾರ್ಥಪ್ರಕಾಶಿಕಾ**

ದ್ವೈತಸಿದ್ಧಾಂತದ ಅಭಿನವ ವಿಶ್ವಾಮಿತ್ರರು ಶ್ರೀಮದುತ್ತರಾದಿಮಠಾಧೀಶರಾದ ಶ್ರೀಸತ್ಯನಾಥತೀರ್ಥರು. ಹೊಸರೀತಿಯ ವಿಚಾರ, ನವೀನ ಪರಿಷ್ಕಾರಪದ್ಧತಿ, ವಿಲಕ್ಷಣ ವಾಕ್ಯಾರ್ಥರೀತಿ ಇವುಗಳನ್ನು ಇವರ ಗ್ರಂಥಗಳಾದ ಅಭಿನವಚಂದ್ರಿಕಾ, ಅಭಿನವತಾಂಡವ, ಅಭಿನವಗದಾ, ಅಭಿನವಾಮೃತ ಮುಂತಾದ

ಗ್ರಂಥಗಳಲ್ಲಿ ನಾವು ಕಾಣುತ್ತೇವೆ. ಇವರ ಅಚ್ಚು-ಮೆಚ್ಚಿನ ಶಿಷ್ಯರು ಶ್ರೀಸತ್ಯಾಭಿನವತೀರ್ಥರು. ಇವರ ಪೂರ್ವಾಶ್ರಮದ ಹೆಸರು ಅತ್ಕ್ಯಾರ್ಷಿ ನರಸಿಂಹಾಚಾರ್ಯರು. ಇವರ ತಂದೆ ಸುಮತಿಯತಿಗಳು. ಅವರು ಶ್ರೀಮದುತ್ತರಾದಿಮಠದ ಶ್ರೀಸತ್ಯನಿಧಿತೀರ್ಥರ ಶಿಷ್ಯರು. ಶ್ರೀಸತ್ಯನಿಧಿಗಳ ಅನುಗ್ರಹವೂ ನರಸಿಂಹಾಚಾರ್ಯರು ಉತ್ತರಾದಿ ಮಠಾಧೀಶರಾಗುವದಕ್ಕೆ ಮುಖ್ಯಕಾರಣ. ಭುಕ್ತಿಯಿಂದ ಮುಕ್ತಿಯವರೆಗೆ ಏನನ್ನೇ ಸಾಧಿಸಬೇಕಾದರೂ ಅದಕ್ಕೆ ಗುರುಭಕ್ತಿ-ಗುರುಶಕ್ತಿ ಬೇಕು. ಅದಕ್ಕೆ ಉತ್ತಮ ಉದಾಹರಣೆ ಶ್ರೀಸತ್ಯಾಭಿನವರು.

ಗುರುಭಕ್ತಿಯ ಸಾಕಾರ ಮೂರ್ತಿ. ಗುರುಗಳನ್ನು ತಮ್ಮ ತಾಯಿ- ತಂದೆ- ಅಣ್ಣ - ಸಕಲವೂ ಆಗಿದ್ದಾರೆಂದು ಶಿಷ್ಯರು ಸೇವಿಸಬೇಕೆಂದು ತೋರಿಸಿದವರು ಮತ್ತು ಹಾಗೆ ಸೇವಿಸಿದವರು. ದೇಶದಲ್ಲಿ ವಿಧರ್ಮೀಯರ ಅಟ್ಟಹಾಸ ಮೆರೆಯುತ್ತಿದ್ದಾಗಲೂ ಗುರುಸ್ಮರಣೆಯಿಂದ ಸಕಲ ಆಪತ್ತಿನ ಪರಿಹಾರ ಕಂಡು ನಿರ್ವಿಘ್ನವಾಗಿ ಪಾಠ-ಪ್ರವಚನ, ವಾದಿವಿಜಯ, ದೇಶದಿಗ್ವಿಜಯಗಳನ್ನು ಮಾಡಿದವರು. ಶ್ರೀಸತ್ಯನಾಥತೀರ್ಥರ ಸಂಪೂರ್ಣಾನುಗ್ರಹ ಪಾತ್ರರೆಂದು ಹೇಳಿದರೆ ತಪ್ಪಾಗಲಾರದು.

'ನಿನ್ನಿಂದ ಭಾಗವತ ಟಿಪ್ಪಣಿಯನ್ನು ಬರೆಸುವೆ' ಎಂಬ ಶ್ರೀಸತ್ಯನಾಥತೀರ್ಥರ ಅಮೋಘಸಂಕಲ್ಪವೇ ಭಾಗವತ ಟಿಪ್ಪಣಿಯನ್ನು ಬರೆಸಿತು ಎಂದು ತಮ್ಮ ಭಾಗವತಟಿಪ್ಪಣಿಯಲ್ಲಿ ಹೇಳಿದರೆ, ಮಹಾಭಾರತತಾತ್ಪರ್ಯನಿರ್ಣಯ ಟಿಪ್ಪಣಿಯಲ್ಲಿ 'ಶ್ರೀಸತ್ಯನಾಥತೀರ್ಥರ ಪಾದಪೀಠಪೂಜೆಯನ್ನು ಮಾಡಿದ ಪುಣ್ಯಲೇಶದಿಂದ ಈ ಟಿಪ್ಪಣಿಯನ್ನು ಬರೆಯಲು ಸಾಧ್ಯವಾಯಿತೆಂದು ಗುರುಗಳನ್ನು ಅನನ್ಯ ಭಕ್ತಿಯಿಂದ ಸ್ಮರಿಸುತ್ತಾರೆ.

ತಮ್ಮ ಗುರುಗಳ ಮಾಹಾತ್ಮ್ಯವನ್ನು ತಮ್ಮ ಅಮೂಲ್ಯವಾದ ಶ್ರೀಸತ್ಯನಾಥಾಭ್ಯುದಯ ಮುಂತಾದ ಗ್ರಂಥಗಳಲ್ಲಿ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ಅವರ ಅಮೂಲ್ಯ ಕೃತಿ ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯವ್ಯಾಖ್ಯಾನ 'ದುರ್ಘಟಾರ್ಥಪ್ರಕಾಶಿಕಾ'. ಶ್ರೀಪಾದರು ಕೆಲವೇ ಶ್ಲೋಕಗಳಿಗೆ ವ್ಯಾಖ್ಯಾನ ಮಾಡಿದರೂ, ಶ್ರೀಮದಾಚಾರ್ಯರ ವಾಕ್ಯದಲ್ಲಿ ಮೇಲೆ ತೋರುವ ವೈಯರ್ಥ್ಯ, ಅನನ್ವಯ, ಪುನರುಕ್ತಿ, ಅಸಂಗತಿ ಮುಂತಾದ ದೋಷಗಳನ್ನು ಪರಿಹಾರ ಮಾಡಿದ್ದಾರೆ. ಮೊದಲಿಗೆ ಶ್ಲೋಕಕ್ಕೆ ಅನ್ವಯಾರ್ಥವನ್ನು ಹೇಳುತ್ತಾರೆ. ಅನಂತರ ಅದರಿಂದ ಪರಿಹಾರವಾದ ದೋಷಗಳನ್ನು ತೋರಿಸಿ, ಉಪಸಂಹಾರ ಮಾಡುವುದು ಇವರ ಟಿಪ್ಪಣಿಯ ವಿಶೇಷತೆ.

ಅವರ ಕೃತಿಗಳು ೧.ಮಹಾಭಾರತತಾತ್ಪರ್ಯನಿರ್ಣಯ ದುರ್ಘಟಾರ್ಥಪ್ರಕಾಶಿಕಾ, ೨.ಭಾಗವತ-ತಾತ್ಪರ್ಯನಿರ್ಣಯ ದುರ್ಘಟಾರ್ಥಪ್ರಕಾಶಿಕಾ, ೩.ಶ್ರೀಸತ್ಯನಾಥಗುರುಸ್ತುತಿ, ೪.ಸ್ವೋಪಜ್ಞ ವ್ಯಾಖ್ಯಾಸಮೇತ ರಾಮಾಮೃತಮಹಾರ್ಣವ.

**೫. ಶ್ರೀಮಧುಸೂದನಭಿಕ್ಷುಗಳು - ಪ್ರಮಾಣಸಂಗ್ರಹ**

ಶ್ರೀಮದಾನಂದತೀರ್ಥಭಗವತ್ಪಾದರು ಸತ್ಸಿದ್ಧಾಂತವನ್ನು ಪ್ರತಿಷ್ಠೆ ಮಾಡುವದಕ್ಕಾಗಿ ಅನೇಕ ಶ್ರುತಿ, ಸ್ಮೃತಿ, ಪುರಾಣ ಗ್ರಂಥಗಳನ್ನು ಉದಾಹರಿಸುತ್ತಾರೆ. ಆ ಗ್ರಂಥಗಳು ಈಗ ಉಪಲಬ್ಧವಾಗಿಲ್ಲ. ಉಪಲಬ್ಧವಾದ ಗ್ರಂಥಗಳಲ್ಲೂ ಅನೇಕ ವಾಕ್ಯಗಳು ಈಗ ನಮಗೆ ಸಿಗುವುದಿಲ್ಲ. ಹಾಗಾಗಿ ಶ್ರೀಮದಾಚಾರ್ಯರು

ಅಪ್ರಾಮಾಣಿಕವಾದ ಅಥವಾ ಸ್ವಕಪೋಲಕಲ್ಪಿತವಾದ ಸಿದ್ಧಾಂತವನ್ನು ಹೇಳುತ್ತಾರೆ ಎಂದು ಅನೇಕ ಅಜ್ಞಾನಿಗಳು ಮಾತಾಡುತ್ತಾರೆ. ಈ ಆಕ್ಷೇಪಕ್ಕೆ ಮೊಟ್ಟಮೊದಲು ಉತ್ತರವನ್ನು ಮಹಾಭಾರತತಾತ್ಪರ್ಯ-ನಿರ್ಣಯದ ವಿಷಯದಲ್ಲಿ ಕೊಟ್ಟವರು ಶ್ರೀಮಧುಸೂದನಭಿಕ್ಷುಗಳು. ಇವರು ಉತ್ತರಾಧಿಮಠಾಧೀಶರಾದ ಶ್ರೀವಿದ್ಯಾಧೀಶತೀರ್ಥಶ್ರೀಪಾದಂಗಳವರ ಶಿಷ್ಯರು. ಅದನ್ನು ತಮ್ಮ ಗ್ರಂಥದ ಆದಿಯಲ್ಲಿ ತಾವೇ ಹೇಳಿದ್ದಾರೆ.

ವಿದ್ಯಾಧೀಶಕರಾಬ್ಜೋತ್ಥಮಧುಸೂದನಭಿಕ್ಷುಕಃ ।
ತನುತೇ ಭಾರತಾರ್ಥಸ್ಯ ನಿರ್ಣಯೇ ಮಾನಸಂಗ್ರಹಮ್ ॥

ಅನೇಕ ಪುರಾಣಗಳು, ಮಹಾಭಾರತ, ಹರಿವಂಶ, ರಾಮಾಯಣ, ಸ್ಮೃತಿಗಳಿಂದ ಶ್ರೀಮದಾಚಾರ್ಯರು ಹೇಳಿದ ಪ್ರಮೇಯಗಳಿಗೆ ಅನುಕೂಲವಾದ ಪ್ರಮಾಣಗಳನ್ನು ಹುಡುಕಿ ಉದಾಹರಿಸುತ್ತಾರೆ. ರಾಮ-ಪರಶುರಾಮರ ಸಮಾಗಮ ಸಮಯದಲ್ಲಿ ರಾಮದೇವರು ಪರಶುರಾಮ ದೇವರ ದೇಹದಲ್ಲಿದ್ದ ಅತುಲನಾಮಕ ಅಸುರನನ್ನು ಸಂಹಾರಮಾಡಿದರು ಎಂದು ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. ಈ ವಿಷಯಕ್ಕೆ ಆಧಾರವಾಗಿ ಮಧುಸೂದನಭಿಕ್ಷುಗಳು ತಮ್ಮ ಟಿಪ್ಪಣಿಯಲ್ಲಿ ಪದ್ಮಪುರಾಣದ ವಚನವನ್ನು ಉದಾಹರಿಸಿದ್ದಾರೆ. ಅದೇ ರೀತಿಯಾಗಿ ಶಾರ್ಙ್ಗಗಾಂಡೀವ ಪಿನಾಕಧನುಸ್ಸುಗಳ ಉತ್ಪತ್ತಿಯ ರೋಚಕ ಕಥೆ, ಸಮುದ್ರತರಣ ಸಂದರ್ಭದಲ್ಲಿ ಹನುಮಂತದೇವರೇ ಏಕೆ ಸಮುದ್ರದಾಟಬೇಕಾಯಿತು ಎನ್ನುವದಕ್ಕೆ ಕಾರಣ, ವಿಶ್ವಾಮಿತ್ರರ ಬ್ರಾಹ್ಮಣ್ಯಕ್ಕೆ ಯಾರು ಯಾರು ಅನುಗ್ರಹ ಮಾಡಿದವರು ಹೀಗೆ ಅನೇಕ ವಿಷಯಗಳಲ್ಲಿ ತಮ್ಮದೇ ಆದ ಅಪೂರ್ವ ಕೊಡುಗೆಯಾಗಿ ಈ ಟಿಪ್ಪಣಿಯನ್ನು ರಚಿಸಿದ್ದಾರೆ. ತಮ್ಮ ಗ್ರಂಥದಲ್ಲಿ ತಮಗಿಂತ ಪೂರ್ವಟೀಕಾಕಾರರಾದ ವ್ಯಾಸತೀರ್ಥರು, ವೇದಾಂಗತೀರ್ಥರು, ಆದ್ಯವರದರಾಜಾಚಾರ್ಯರು, ಅನಂತಭಟ್ಟರು ಇವರುಗಳನ್ನು ಉದಾಹರಿಸುತ್ತಾರೆ. ಈ ಗ್ರಂಥಗಳ ಅಧ್ಯಯನಮಾಡಿ ವ್ಯಾಖ್ಯಾನ ಮಾಡುತ್ತೇನೆ ಎಂದು ವಿನಯದಿಂದ ಹೇಳುತ್ತಾರೆ. ಇವರ ಬಗೆಗೆ ಹೆಚ್ಚಿನ ಯಾವ ವಿವರವೂ ತಿಳಿದಿಲ್ಲ. ಇತರ ಗ್ರಂಥಗಳು ಉಪಲಬ್ಧವಾಗಿಲ್ಲ.

**೬. ಆದ್ಯ ವರದರಾಜಾಚಾರ್ಯರು - ಮಂದಸುಬೋಧಿನೀ**

ಆದ್ಯ ವರದರಾಜಾಚಾರ್ಯರು ಮಣ್ಣೂರಿನವರು. ಇವರ ತಂದೆ ಶೇಷದಾಸಾಚಾರ್ಯರು. ಇವರು ಶ್ರೀಮದುತ್ತರಾದಿಮಠಾಧೀಶರಾದ ಬ್ರಹ್ಮಾಪರೋಕ್ಷಿಗಳಾದ ಶ್ರೀರಘುನಾಥತೀರ್ಥರ ಹತ್ತಿರ ಸಮಗ್ರಮಧ್ವಶಾಸ್ತ್ರವನ್ನು ಅಧ್ಯಯನಮಾಡಿ ಸಮಕಾಲೀನ ಪಂಡಿತಮೂರ್ಧನ್ಯರಾದರು. ನಿರಂತರ ಪಾಠ-ಪ್ರವಚನ ಮಾಡಿದವರು. ಇವರನ್ನು ಶ್ರೀರಘುನಾಥತೀರ್ಥರು ಒಮ್ಮೆ ಪಂಡಿತರ ಸಭೆಯಲ್ಲಿ ನಿಮ್ಮ ವಂಶದವರಿಗೆ ಮಠದಲ್ಲಿ ಮೊದಲು ತೀರ್ಥ, ಮೊದಲು ಮರ್ಯಾದೆ ಎಂದು ಆದ್ಯ ಮರ್ಯಾದೆಯನ್ನು ಅನುಗ್ರಹಿಸಿದರು. ಕಾರಣ ಆದ್ಯರೆಂದು ಆಗಿನಿಂದ ಉಪನಾಮ ಭೂಷಿತರಾದರು. ಇವರಿಗೆ ತಮ್ಮ ಆರಾಧ್ಯದೈವನಾದ ಮಣ್ಣೂರಿನ ಕೇಶವದೇವರಲ್ಲಿ ನಿಃಸ್ಸೀಮ ಭಕ್ತಿ. ಅದನ್ನು ಅವರು ರಚಿಸಿರುವ ಚೆನ್ನಕೇಶವಾಷ್ಟಕ ಎತ್ತಿ ತೋರಿಸುತ್ತದೆ. ತಾತ್ಪರ್ಯನಿರ್ಣಯಕ್ಕೆ ಉಪಲಬ್ಧವಿರುವ ಗೃಹಸ್ಥ ಟಿಪ್ಪಣಿಕಾರರ ಮಾಹಿತಿಯನ್ನು ಅವಲೋಕಿಸಿದರೆ ಮೊಟ್ಟ ಮೊದಲಿಗರು ಆದ್ಯ ವರದರಾಜಾಚಾರ್ಯರು. ಮಹಾಭಾರತತಾತ್ಪರ್ಯನಿರ್ಣಯಕ್ಕೆ ಉಪಲಬ್ಧವಾಗಿರುವ 'ಮಂದಸುಬೋಧಿನೀ' ಟಿಪ್ಪಣೀ ಆದ್ಯ ವರದರಾಜಾಚಾರ್ಯರ ಕೃತಿಯಾಗಿದೆ. ಈ ವಿಷಯದಲ್ಲಿ ವಿವಾದವಿಲ್ಲ. ಇದನ್ನು, ಆದ್ಯವರದರಾಜಾ-

ಚಾರ್ಯರ ಮೊಮ್ಮಕ್ಕಳ ಮೊಮ್ಮಕ್ಕಳು ಇಮ್ಮಡಿ ವರದರಾಜಾಚಾರ್ಯರು, ಕನ್ನಡಭಾಷೆಯಲ್ಲಿ ತಾವು ಬರೆದ ಶ್ರೀಮದ್ಭಗವದ್ಗೀತಾಟೀಕಾದ ಅಂತ್ಯದಲ್ಲಿ ಹೀಗೆ ಹೇಳಿದ್ದಾರೆ -

ಆಸೀದ್ವರದರಾಜಾರ್ಯಃ ಶೇಷದಾಸಾರ್ಯಸಂಭವಃ ।
ಆಸಾದಿತಗುರುಪ್ರೀತಿರೀಶಾಚಲಿತಭಕ್ತಿಭಾಕ್ ॥

ಸ ಶ್ರೀರಘುನಾಥತೀರ್ಥಮುಖತೋ ಬ್ರಹ್ಮಾಪರೋಕ್ಷಜ್ಞತಃ
ಶ್ರೀಮನ್ಮಧ್ವನಯಂ ಮಹಾಸುಖಕರಂ ಶುಶ್ರಾವ ಭಕ್ತ್ಯಾನ್ವಿತಃ ।
ಶಿಷ್ಯಾನಪ್ಯುಪದಿಶ್ಯ ಶಾಸ್ತ್ರಮಖಿಲಂ ಶ್ರೀಮಧ್ವಮೌನೀರಿತಂ
ಮೇದಿನ್ಯಾಂ ಪ್ರಕಟೀಚಕಾರ ಮತಿಮಚ್ಛಿಷ್ಯಪ್ರಶಿಷ್ಯಾದಿಭಿಃ ॥

ಅಸ್ಮಚ್ಛಿಷ್ಯಪ್ರಶಿಷ್ಯಪ್ರಭೃತಿಯತಿಗಣ (ಣಾಃ) ರಾಮಪೂಜಾನಿಯುಕ್ತಾಃ
ಶ್ರೀಪಾದಾಃ ಪ್ರಾಶ್ಯತೀರ್ಥಂ ಸ್ವಯಮಥ ಪರಿಷತ್ಪ್ರಾಪ್ತವಿದ್ವಜ್ಜನೇಭ್ಯಃ ।
ಆದೌ ತ್ವದ್ವಂಶಜೇಭ್ಯಃ ದದತು ಶುಚಿಕರಂ ತೀರ್ಥಮಗ್ರೇ ಚ ಪೂಜ್ಯಾಃ
ಸಂತು ತ್ವದ್ವಂಶಜಾತಾ ಇತಿ ವರಮದದಾತ್ತದ್ಗುರುಃ ಪ್ರೀತಿತೋಽಸ್ಮೈ ॥

ಸ ಸತಾಮುಪಕಾರಾಯ ಸಂಪ್ರದಾಯಜ್ಞಶೇಖರಃ ।
ಟೀಕಾಂ ಭಾರತತಾತ್ಪರ್ಯನಿರ್ಣಯಸ್ಯಾಕರೋತ್ ಸುಧೀಃ ॥

ವರದರಾಜಾಚಾರ್ಯರು ತಮಗಿಂತಲೂ ಹಿಂದೆ ಇದ್ದ ವ್ಯಾಖ್ಯಾನಕಾರರ ಅಭಿಪ್ರಾಯವನ್ನು ಉದಾಹರಿಸುತ್ತಾರೆ. (ಅತ್ರ ಟಿಪ್ಪಣೀಕಾರಾಃ- ದ್ವೀಪೇಷು ಸಪ್ತಸು ಇತ್ಯೇತತ್ ಜಂಬೂಪ್ಲಕ್ಷಾದಿಷು ಇತಿ ವ್ಯಾಖ್ಯಾತಾಃ) ಈ ವಾಕ್ಯಗಳು ಈಗ ಉಪಲಬ್ಧವಿರುವ ವ್ಯಾಸತೀರ್ಥೀಯ ಅಥವಾ ವೇದಾಂಗತೀರ್ಥೀಯ ಟಿಪ್ಪಣಿಯಲ್ಲಿ ಉಪಲಬ್ಧವಾಗಿಲ್ಲ. ಆದ್ದರಿಂದ ಇವರಿಬ್ಬರಲ್ಲದೇ ಇನ್ನು ಬೇರೆ ವ್ಯಾಖ್ಯಾನಕಾರರು ಇದ್ದರು ಎಂದು ಊಹಿಸಬಹುದು.

**೭. ಅನಂತಭಟ್ಟರು – ತಂತ್ರಮಾಲಾ (ಸತ್ತತ್ವಮಾಲಾ)**

ಅನಂತಭಟ್ಟರ ತಂದೆ ನರಸಿಂಹಾಚಾರ್ಯರು. ಅವರು ಹೈದರಾಬಾದ ಪ್ರಾಂತದ ಚೇಟಿ ಹಳ್ಳಿಯವರು. ಅತ್ರಿ ಗೋತ್ರದವರು. ಋಗ್ವೇದಿಗಳು. ಮಹಾಶ್ರೀಮಂತರು. ಔದಾರ್ಯದಿಂದ ತಮ್ಮ ಸೋದರರಿಗೆ ಎಲ್ಲವನ್ನು ಕೊಟ್ಟು ತಾವು ದಕ್ಷಿಣದೇಶಸಂಚಾರ ಮಾಡಿದರು. ಶ್ರೀರಂಗನಾಥನ ದಿವ್ಯ ಸನ್ನಿಧಾನದಿಂದ ಪರಮ ಪಾವನವಾದ ಶ್ರೀರಂಗಕ್ಷೇತ್ರದಲ್ಲಿ ನಿಂತು ಬಹು ಕಾಲ ಪಾಠ-ಪ್ರವಚನ ಮಾಡಿದರು. ಅವನನ್ನೇ ಕುಲದೈವವೆಂದು ಆರಾಧಿಸುತ್ತಿರಬಹುದು. ಅಂತೆಯೇ 'ಪ್ರೀತ್ಯೈ ರಂಗೇಶಮಧ್ವಯೋಃ' ಎಂದು ಅನಂತಭಟ್ಟರು ತಮ್ಮ ತಾತ್ಪರ್ಯನಿರ್ಣಯ ಟಪ್ಪಣಿಯ ಉಪಸಂಹಾರದಲ್ಲಿ ಹೇಳಿದ್ದಾರೆ. ಅನಂತರ ನರಸಿಂಹಾಚಾರ್ಯರು ಶ್ರೀಮುಷ್ಣಂ ಗೃಹಸ್ಥರ ಪ್ರಾರ್ಥನೆಯಂತೆ ಅಲ್ಲಿ ನೆಲೆಸಿದರು. ಅಂದಿನಿಂದ ಶ್ರೀಮುಷ್ಣಂ ಎಂದು ಉಪನಾಮವಾಯಿತು. ಈ ಮನೆತನದವರಿಗೆ ಶ್ರೀಮುಷ್ಣದ ವರಾಹದೇವರ ದೇವಾಲಯದಲ್ಲಿ ವಿಶೇಷ ಮರ್ಯಾದೆ. ಅತ್ಯಂತ ಸುಷ್ಠು ಆಚಾರನಿಷ್ಠರು. ಸುಮಾರು ಇಪ್ಪತ್ತು (೨೦) ಬಾರಿ ಶ್ರೀಮನ್ನ್ಯಾಯಸುಧಾಗ್ರಂಥವನ್ನು ಪಾಠ ಹೇಳಿದವರು. ಇವರ ವಿದ್ಯಾಸಂತತಿ ಬಹಳ. ಅನೇಕ

ಯತಿಗಳಿಗೂ ಪೀಠಾಧೀಶ್ವರರಿಗೂ ಪಾಠ ಹೇಳುವ ಪರಮ ಸೌಭಾಗ್ಯ ಅವರದ್ದಾಗಿತ್ತು. ಇವರಲ್ಲಿ ಉಡುಪಿಯ ಶ್ರೀಕೃಷ್ಣಪೂಜಕರಾದ ಎಂಟು ಪೀಠಾಧಿಪತಿಗಳು ಮತ್ತು ಶ್ರೀರಾಮನ ಆರಾಧಕರಾದ ಅನೇಕ ಪರಿವ್ರಾಜಕರು ಅಧ್ಯಯನ ಮಾಡಿದ್ದಾರೆ. ಬೇರೆ ಬೇರೆ ದೇಶದಿಂದ ಬಂದು ಅನೇಕರು ಇವರಲ್ಲಿ ಹಣಿ ಮಣಿದು ಓದಿದರು. ತಾಮ್ರಪರ್ಣೀ ಮನೆತನ ಮೂಲಪುರುಷರಾದ ನಾರಾಯಣಾಚಾರ್ಯರೂ ನರಸಿಂಹಾಚಾರ್ಯರ ಪ್ರಿಯ ಶಿಷ್ಯರು. ಅದನ್ನು ತಾರತಮ್ಯ ಪಾರಿಜಾತ ಎಂಬ ಗ್ರಂಥದಲ್ಲಿ ಅನಂತಭಟ್ಟರು ಉಲ್ಲೇಖಿಸುತ್ತಾರೆ.

ಅಷ್ಟೌ ಹಿ ತೌಲವಾಃ ಕೃಷ್ಣಚರಣಾಂಭೋರುಹಾರ್ಚಕಾಃ ।
ಶ್ರೀಪಾದಾಃ ರಘುನಾಥಸ್ಯ ತಥಾನ್ಯೇ ಚರಣಾರ್ಚಕಾಃ ॥
ಅನ್ಯೇ ಚ ಬಹುದೇಶಸ್ಥಾಃ ಮಧ್ವಶಾಸ್ತ್ರಂ ಹಿ ಯನ್ಮುಖಾತ್ ॥

ಅದರಂತೆ ಅನಂತಭಟ್ಟರು ಮಹಾಭಾರತತಾತ್ಪರ್ಯನಿರ್ಣಯದ ಟಿಪ್ಪಣಿಯ ಉಪಸಂಹಾರದಲ್ಲಿಯೂ ಹೇಳಿದ್ದಾರೆ.

ಯೇಷಾಂ ಮುಖಾಂಬುಜಾಚ್ಛ್ರುತ್ವಾ ಯತಯೋ ಗೃಹಿಣಸ್ತಥಾ ।
ಅನೇಕಸಂಖ್ಯಾ ವ್ಯಾಚಖ್ಯುಃ ಮಧ್ವಶಾಸ್ತ್ರಂ ನಮಾಮಿ ತಮ್ ॥

ಇವರ ವಂಶದಲ್ಲಿ ಮುಂದೆ ಆರ್ಯಾಚಾರ್ಯರು ಎಂದು ಪ್ರಸಿದ್ಧರಾದ ಜ್ಞಾನಿಗಳಾದರು. ಅವರು ತಮ್ಮ 'ಸಚ್ಛಾಸ್ತ್ರಶ್ರವಣಭೂಷಣ' ಎಂಬ ಗ್ರಂಥದಲ್ಲಿ ನರಸಿಂಹಾಚಾರ್ಯರ ಬಗ್ಗೆ ಹೇಳಿದ್ದಾರೆ. ಅಲ್ಲಿ ನರಸಿಂಹಾಚಾರ್ಯರು ಶ್ರೀವ್ಯಾಸರಾಯರು, ಶ್ರೀವಿಜಯೀಂದ್ರರು, ಶ್ರೀವಾದಿರಾಜರು, ಶ್ರೀವೇದವ್ಯಾಸತೀರ್ಥರು, ಶ್ರೀಯಾದವಾರ್ಯರಿಂದ ಸಮ್ಮಾನಿತರಾಗಿದ್ದರು ಎಂದು ವರ್ಣಿಸುತ್ತಾರೆ.

ಅವರಿಗೆ ನಾಲ್ಕು ಜನ ಮಕ್ಕಳು. ಪೂರ್ಣಬೋಧಾಚಾರ್ಯರು, ಗುಹಾವಾಸೀ ಕೃಷ್ಣಾಚಾರ್ಯರು, ಗೋಪಾಲಾಚಾರ್ಯರು ಮತ್ತು ಅನಂತಾಚಾರ್ಯರು. ಅನಂತಾಚಾರ್ಯರು ಮಹಾವಿದ್ವಾಂಸರು. ತಮ್ಮ ತಂದೆಯ ಪಾದದಡಿಯಲ್ಲಿಯೇ ಸಕಲಶಾಸ್ತ್ರಗಳನ್ನು ಮತ್ತು ಶ್ರೀಮದಾಚಾರ್ಯರ ಗ್ರಂಥಗಳನ್ನು ಅಭ್ಯಸಿಸಿದರು. ಈ ಎಲ್ಲಾ ವಿಷಯವನ್ನು ತಮ್ಮ ವ್ಯಾಖ್ಯಾನದ ಉಪಸಂಹಾರದಲ್ಲಿ ನಿರೂಪಿಸಿದ್ದಾರೆ.

ನರಸಿಂಹಾರ್ಯವರ್ಯಾಣಾಮನಂತಾಖ್ಯೇನ ಸೂನುನಾ ।
ಕೃತಾ ಸತ್ತತ್ತ್ವಮಾಲಾಖ್ಯಾ ಪ್ರೀತ್ಯೈ ರಂಗೇಶಮಧ್ವಯೋಃ ॥

ಯೇಽಧ್ಯಾಪಯಿತ್ವಾ ನಿಗಮಾನ್ ಮಧ್ವಸಿದ್ಧಾಂತಮಾದಿಶನ್ ।
ನರಸಿಂಹಾರ್ಯವರ್ಯಾಂಸ್ತಾನ್ ಭೂಯೋ ಭೂಯೋ ನಮಾಮ್ಯಹಮ್ ॥

ಅದರಂತೆಯೇ, ವಿದ್ಯಾಧೀಶವಿಜಯದಲ್ಲಿ ಶ್ರೀವಿದ್ಯಾಧೀಶತೀರ್ಥಶ್ರೀಪಾದರ ಧರ್ಮಪುರಿ ಚಾತುರ್ಮಾಸ್ಯ ಸಂದರ್ಭದಲ್ಲಿ ಅನಂತಾಚಾರ್ಯರು ಎಂಬುವರ ಉಲ್ಲೇಖವಿದೆ. (೯.೩೨) ಅವರು ಶ್ರೀಮುಷ್ಣಂ ಅನಂತಾಚಾರ್ಯರೇ ಎಂದು ಕೆ.ಟಿ.ಪಾಂಡುರಂಗೀ ಅಭಿಪ್ರಾಯಪಟ್ಟಿದ್ದಾರೆ. ಇವರ ಜೊತೆ ಹೇಳಿದ ನರಸಿಂಹಾಚಾರ್ಯರು ಇವರ ತಂದೆ ಆಗಿರಬಹುದು.

ಅನಂತಭಟ್ಟರ ವ್ಯಾಖ್ಯಾನವನ್ನು ಶ್ರೀವಿದ್ಯಾಧೀಶತೀರ್ಥರ ಶಿಷ್ಯರಾದ ಮಧುಸೂದನ ಭಿಕ್ಷುಗಳು (ಶ್ರೀ.೨೧) ಮತ್ತು ಜನಾರ್ದನಭಟ್ಟರು (ಶ್ರೀ.೨೧) ಉದಾಹರಿಸುತ್ತಾರೆ. ಇವರು ತಮ್ಮ ಟಿಪ್ಪಣಿಯಲ್ಲಿ ವಾದಿರಾಜೀಯವನ್ನು (ಶ್ರೀ.೨೧) ಉದ್ಧಾಹರಿಸುತ್ತಾರೆ. ಇದರಿಂದ ವಾದಿರಾಜರಿಗೆ ಅವಾರ್ಚೀನರು ಮತ್ತು ಮಧುಸೂದನ ಭಿಕ್ಷುಗಳು ಮತ್ತು ಜನಾರ್ದನಭಟ್ಟರಿಗೆ ಪ್ರಾಚೀನರು ಎಂದು ಸಿದ್ಧವಾಗುತ್ತದೆ. ಮತ್ತು ಇವರು ಶ್ರೀವಿದ್ಯಾಧೀಶತೀರ್ಥರ ಕಾಲದಲ್ಲಿ ಇದ್ದರು ಎಂದು ಹೇಳುವ ಮಾತನ್ನು ಪುಷ್ಟೀಕರಿಸಬಹುದಾಗಿದೆ.

ಇವರು ಅನೇಕ ಕೃತಿರತ್ನಗಳಿಂದ ಜಗತ್ತನ್ನು ಅನುಗ್ರಹಿಸಿದ್ದಾರೆ. ಇವರು ಬರೆದ ಪ್ರಮಾಣಪದ್ಧತಿ ಮತ್ತು ಪ್ರಮಾಣಲಕ್ಷಣ ಟಿಪ್ಪಣಿಗಳು ತಂಜಾವೂರಿನ ಸರಸ್ವತಿ ಮಹಲ್ ಗ್ರಂಥಾಲಯದಲ್ಲಿ ಉಪಲಬ್ಧವಾಗಿವೆ. ಬೃಹದಾರಣ್ಯಕೋಪನಿಷತ್ ಭಾವಬೋಧ ಸಂಗ್ರಹ, ಛಾಂದೋಗ್ಯಭಾಷ್ಯಟಿಪ್ಪಣೀ, ಈಶಾವಾಸ್ಯ ಟಿಪ್ಪಣೀ, ಐತರೇಯ ಟಿಪ್ಪಣೀ, ವಿಷ್ಣುತತ್ವನಿರ್ಣಯ ಟಿಪ್ಪಣೀ, ತತ್ವವಿವೇಕಟಿಪ್ಪಣೀ, ಖಂಡನತ್ರಯ ಟಿಪ್ಪಣೀ, ತತ್ವೋದ್ಯೋತ ಟಿಪ್ಪಣೀ, ಪ್ರಮಾಣ ಲಕ್ಷಣಟಿಪ್ಪಣೀ, ಕಥಾಲಕ್ಷಣ ಟಿಪ್ಪಣೀ, ತತ್ವಪ್ರಕಾಶಿಕಾ ಟಿಪ್ಪಣೀ, ತಾರತಮ್ಯಪಾರಿಜಾತ ಮುಂತಾದ ಗ್ರಂಥಗಳನ್ನು ರಚಿಸಿ ದ್ವೈತಸಿದ್ಧಾಂತ ಜಿಜ್ಞಾಸುಗಳಿಗೆ ಪರಮೋಪಕಾರ ಮಾಡಿದ್ದಾರೆ. ಇವುಗಳಲ್ಲಿ ಈಶಾವಾಸ್ಯಟಿಪ್ಪಣೀ ವಿಶ್ವಮಧ್ವಪರಿಷತ್ (ಉತ್ತರಾದಿಮಠ) ನಿಂದ ಆಗಲೇ ಪ್ರಕಾಶಿತವಾಗಿದೆ. ಇವುಗಳಲ್ಲಿ ಕೆಲವನ್ನು ತಂಜಾವೂರಿನ ಗ್ರಂಥಾಲಯದಲ್ಲಿ ಮತ್ತು ಕೆಲವನ್ನು ಮದ್ರಾಸ್ ಗ್ರಂಥಾಲಯದಲ್ಲಿ ನಾವು ಕಾಣಬಹುದಾಗಿದೆ.

**೮. ಜನಾರ್ದನಭಟ್ಟರು - ಪದಾರ್ಥದೀಪಿಕಾ**

ಇವರ ತಂದೆ ಹಿರಣ್ಯಾಚಾರ್ಯರು. ಶಮ, ದಮ, ಸ್ವಾಧ್ಯಾಯ, ಹರಿಭಕ್ತಿ ಮುಂತಾದ ಸದ್ಗುಣಗಳ ಆಕರ. ಆಗಿನ ಕಾಲದಲ್ಲಿ ಉತ್ತಮ ವಿದ್ವಾಂಸರು. ತಾಯಿ ಗಂಗಾ. ಇವರು ಅಂಬಾಶಿರ ಎಂಬ ಗ್ರಾಮದವರು. ಇವರು ಜಮದಗ್ನಿ ಗೋತ್ರದವರು. ಇವರ ಉಪಲಬ್ಧವಾದ ಕೃತಿ ಮಹಾಭಾರತತಾತ್ಪರ್ಯನಿರ್ಣಯ. ಇವರಿಗೆ ಇಬ್ಬರು ಮಕ್ಕಳು. ಆನಂದತೀರ್ಥಾಚಾರ್ಯರು ಮತ್ತು ವ್ಯಾಸಾಚಾರ್ಯರು. ಅವರಲ್ಲಿ ಆನಂದತೀರ್ಥಾಚಾರ್ಯರು ಮಾಧ್ವಸನ್ನ್ಯಾಸಪದ್ಧತಿ (ಆತ್ಮಶ್ರಾದ್ಧಪದ್ಧತಿ) ಎಂಬ ಗ್ರಂಥವನ್ನು ರಚಿಸಿದ್ದಾರೆ. ಅದನ್ನು ಡಾ.ಪ್ರಭಂಜನಾಚಾರ್ಯರು ಪ್ರಕಟಿಸಿದ್ದಾರೆ. ಅದರ ಉಪಸಂಹಾರದಲ್ಲಿ ಹೀಗೆ ಇದೆ.

ವಿಷ್ಣುತೀರ್ಥೋಕ್ತಿಮಾಶ್ರಿತ್ಯ ಮನುಂ ಬೌಧಾಯನಂ ತಥಾ ।
ವ್ಯಾಸಾಚಾರ್ಯಸ್ಯಾನುಜೇನ ಕೃತಾತ್ಮಶ್ರಾದ್ಧಪದ್ಧತಿಃ ॥

ಸುಖಸ್ಯಾಧಿಷ್ಠಾನಸಂಸಿದ್ಧ್ಯೈ ಪ್ರೀತ್ಯೈ ಮಧ್ವನೃಸಿಂಹಯೋಃ ।
ಜಾಮದಗ್ನ್ಯಹಿರಣ್ಯಸ್ಯ ಸುತೋ ಭಟ್ಟಜನಾರ್ದನಃ ॥
ತತ್ಸುತಾನಂದತೀರ್ಥಸ್ಯ ಕೃತಿರಸ್ತ್ವರ್ಪಿತಾ ಹರೌ ॥

**೯. ಶ್ರೀನಿವಾಸಾಚಾರ್ಯರು - ಭಾವಚಂದ್ರಿಕಾ**

ಇವರ ತಂದೆ ಗೋವಿಂದಾಚಾರ್ಯರು. (ಗೋವಿಂದಾರ್ಯಸ್ಯ ಪುತ್ರೇಣ ಶ್ರೀನಿವಾಸೇನ ನಿರ್ಮಿತಾ) ವ್ಯಾಸತೀರ್ಥೀಯ- ವೇದಾಂಗತೀರ್ಥೀಯ- ವರದರಾಜೀಯ- ಅನಂತಭಟ್ಟೀಯ- ವಾದಿರಾಜೀಯ

